# ಗೌಡ ಸಂಸ್ಕೃತಿ

## 1985






ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ.

## ಸಂಪಾದಕ ಮಂಡಳಿ

# ವಿಷಯಾನುಕ್ರಮಣಿಕೆ

# ಮುನ್ನುಡಿ

ಕೊಡಗು ಗೌಡ ವಿದ್ಯಾಸಂಘವು 'ಗೌಡ ಸಂಸ್ಕೃತಿ' ಹೊತ್ತಗೆಯನ್ನು ಹೊರ ತರುತ್ತಿರುವುದು ಉತ್ತಮ ಹಾಗೂ ಉಪಯುಕ್ತ ಕಾರ್ಯ. ಬೆಂಗಳೂರಿನ, ಕೊಡಗು ಮತ್ತು ದಕ್ಷಿಣ ಕನ್ನಡ ಸಮಾಜವು ಈ ಕೆಲಸವನ್ನು ತನ್ನ 'ಗೌಡ ಸಂಸ್ಕೃತಿ' ಸಂಚಿಕೆಗಳಲ್ಲಿ ಈಗಾಗಲೇ ಸಂಕ್ಷಿಪ್ತವಾಗಿ ಮಾಡಿದ್ದರೂ ಸಂಚಿಕೆಗಳು ಸಂಪೂರ್ಣವಾಗಿ ಗೌಡ ಸಮಾಜದ ಕಟ್ಟುಕಟ್ಟಳೆ ನಡವಳಿಕೆಗಳನ್ನು ಗುರುತಿಸಿ ಸಂಗ್ರಹಿಸುವ ಗುರಿಯಿಟ್ಟುಕೊಂಡವುಗಳಲ್ಲವಾದ ಕಾರಣ ಸಂಚಿಕೆಗಳಲ್ಲಿ ಅವು ಪರಿಪೂರ್ಣವಾಗಿ ಬಂದಿರುವುದಿಲ್ಲ.

ಪ್ರಸ್ತುತ ಕೊಡಗು ಗೌಡ ವಿದ್ಯಾಸಂಘವು ಈ ಹೊತ್ತಗೆಯ ಮೂಲಕ ಗೌಡ ಸಮಾಜವು ಹಿಂದಿನಿಂದಲೇ ಸಂಪ್ರದಾಯ ಬದ್ಧವಾಗಿ ಆಚರಿಸಿಕೊಂಡು ಬರುತ್ತಿರುವ ದೈನಂದಿನ ಹಬ್ಬ ಹರಿದಿನಗಳ ಹುಟ್ಟಿನಿಂದ ಸಾವಿನ ತನಕದ ಬದುಕಿನ ವಿವಿಧ ಹಂತಗಳಲ್ಲಿ ಆಚರಿಸುತ್ತಿರುವ ಸಮಾರಂಭಗಳ ಶಾಸ್ತ್ರ ವಿಧಿಗಳನ್ನು ಗುರುತಿಸಿ ಕಲೆ ಹಾಕಿ ನಮ್ಮ ಜನಪದದಲ್ಲಿ ಪರಂಪರೆಯ ಉತ್ತಮ ಮೌಲ್ಯಗಳು ಅಳಿದು ಹೋಗಬಾರದೆನ್ನುವ ಪ್ರಾಮಾಣಿಕವಾದ ಕಳಕಳಿಯ ಕರೆ ನೀಡಿದೆ.

ಹಳೆಯ ಸಂಪ್ರದಾಯಗಳನ್ನು ಕಲೆ ಹಾಕುವುದರಲ್ಲೇ ನಮ್ಮ ಕಾರ್ಯ ಮುಗಿಯುವುದಿಲ್ಲ. ಅವನ್ನು ಶಾಸ್ತ್ರೀಯ ಹಾಗೂ ವೈಜ್ಞಾನಿಕವಾಗಿ ವಿಶ್ಲೇಷಿಸಿ ಆಧುನಿಕ ಬದುಕಿಗೆ ಹೊಂದಿಕೆಯಾಗುವಂತೆ ಮಾಡುವುದೂ ಮುಖ್ಯ. ಜತೆಗೆ ಪ್ರಾದೇಶಿಕ ವ್ಯತ್ಯಾಸಗಳನ್ನು ಗುರುತಿಸಿ ಔಚಿತ್ಯ ಪೂರ್ಣ ಏಕರೂಪತೆಯೂ ಅಗತ್ಯ. ದಕ್ಷಿಣ ಕನ್ನಡ ಮತ್ತು ಕೊಡಗಿನ ನಮ್ಮ ಸಮಾಜದ ಕ್ರಮ ಕಟ್ಟಳೆಗಳಲ್ಲಿ ಏಕರೂಪತೆಯ ಅತ್ಯಗತ್ಯವಲ್ಲವೇ? ಗೌಡ ಸಮಾಜದ ಪದ್ಧತಿಗಳನ್ನು ಕುರಿತು ಪರಿಣತರ ಒಂದು ಅಧಿಕೃತ ಸಮಿತಿಯನ್ನು ರಚಿಸಿ ಎರಡು ಜಿಲ್ಲೆಗಳ ವಿದ್ಯಾಸಂಘಗಳು ಈ ಕಾರ್ಯವನ್ನು ಮಾಡಬೇಕಾದ ಕಾಲ ಸನ್ನಿಹಿತವಾಗಿದೆ. ಅಲ್ಲದೆ ನಮ್ಮ ಜನಪದ ಹಾಡುಗಳು, ಸೋಬಾನೆಗಳು ವಿವಿಧ ಸಮಾರಂಭಗಳಲ್ಲಿ ಉದ್ಘೋಷಿಸುವ ನುಡಿಗಟ್ಟುಗಳು ನಮ್ಮವೇ ಆದ 'ಗೌಡ ಅರೆಭಾಷೆ'ಯಲ್ಲೇ ಇದ್ದಿರಬೇಕು. ಅಳಿದು ಹೋಗಿರಬಹುದಾದ ಅವುಗಳನ್ನು

ನಾವಿಂದು ಗುರುತಿಸಿ ಮತ್ತೆ ಬಳಸಿಕೊಳ್ಳಬೇಕು ಅಂತೆಯೇ ಗೌಡ ಜನಾಂಗದ ಮನೆ ಭಾಷೆಯನ್ನು ಯಾವ ಸೂಕ್ತ ಹೆಸರಿನಿಂದ ಹೆಸರಿಸಬೇಕೆನ್ನುವ ನಿರ್ಧಾರಕ್ಕೆ ಬರುವುದು ಒಳ್ಳೆಯದಲ್ಲವೇ ?

ಬಹಿರಂಗವಾಹಿನಿ ನಾಗರಿಕತೆಯಲ್ಲಿ ಬದುಕಿನ ಹೊಲವನ್ನು ಹಚ್ಚ ಹಸಿರು ಮಾಡಿಕೊಳ್ಳುವ ನಮ್ಮ ಹಂಬಲದ ಆತುರದಲ್ಲಿ ಅದಕ್ಕೆ ಆಗರವಾದ ಅಂತರಗಂಗೆ ಸಂಸ್ಕೃತಿಯ ನೆಲೆ, ಬತ್ತಿ ಹೋಗದಂತೆಯೂ ನಾವು ಎಚ್ಚರವಿರಬೇಕು. 'ಹಳೆಬೇರು ಹೊಸ ಚಿಗುರು' ಎಂಬಂತೆ ಉತ್ತಮ ಸಂಸ್ಕೃತಿಯನ್ನು ಉಳಿಸಿ ನಾಗರಿಕತೆಯನ್ನು ಬೆಳೆಸುವ ದಿಸೆಯಲ್ಲಿ ನಮ್ಮ ಗೌಡ ವಿದ್ಯಾಸಂಘಗಳು ಪ್ರಾಮಾಣಿಕ ಕಾರ್ಯ ಆರಂಭಿಸಬೇಕು. ಮುಖ್ಯವಾಗಿ ನಮ್ಮ ವಿದ್ಯಾಸಂಘಗಳಿಗೆ ಹೊಸ ಕಾಯಕಲ್ಪವಾಗಬೇಕು. ನಮ್ಮ ಸಮಾಜದ ಸಂಘ ಸಂಸ್ಥೆಗಳು ನಮ್ಮ ಯುವ ಪ್ರತಿಭಾವಂತರ ಮುಖವಾಣಿಯಾಗಬೇಕು.

ಕೊಡಗು ವಿದ್ಯಾಸಂಘವು ಈ ಕುರಿತು ಎಚ್ಚಂತ್ತಿದೆ. 'ಗೌಡ ಸಂಸ್ಕೃತಿ' ಹೊತ್ತಗೆಂಯನ್ನು ಹೊರ ತರುತ್ತಿರುವ ಸಂಘದ ಅಧ್ಯಕ್ಷ ಶ್ರೀ ಕೆ.ಬಿ. ಕೃಷ್ಣಪ್ಪ ನ್ಯಾಯವಾದಿ, ಯುವ ನಿರ್ದೇಶಕರ ಅಮಿತ ಉತ್ಸಾಹ ಚಟುವಟಿಕೆಗಳು ಸಮಾಜ ಸಂಸ್ಕೃತಿಗಳ ಬಗ್ಗೆ ಅವರಿಗಿರುವ ಕಳಕಳಿಗಳು ಅಪಾರವಾದವು. ಅನುಭವದ ಅಧ್ಯಕ್ಷತೆಗೆ ಕಾರ್ಯದರ್ಶಿ ಶ್ರೀ ಆಜಡ್ಕ ಕೃಷ್ಣಪ್ಪನವರ ಸಾರಥ್ಯವು ಪೂರಕವಾಗಿದೆ. ಸಂಘದ ಸದಸ್ಯರೆಲ್ಲರ ಸಹಕಾರದಿಂದ ಸಂಘವು ಕ್ರಿಯಾಶೀಲವಾಗಿ ಈ ಉತ್ತಮ ಕಾರ್ಯವನ್ನು ಕೈಗೆತ್ತಿಕೊಂಡು ಮುಗಿಸಿರುತ್ತದೆ. ನಮ್ಮ ಸಮಾಜಕ್ಕೆ ಆಗಬೇಕಾಗಿರುವ ಹಲವು ಅಭಿವೃದ್ಧಿ ಕಾರ್ಯಗಳಿಗೆ ಇದು ನಾಂದಿಯಾಗಲಿ. ಸಮಾಜದ ಉತ್ಸಾಹವು ಬತ್ತದ ತೊರೆಯಾಗಲಿ ಎಂದು ಹಾರೈಸುವುದರೊಂದಿಗೆ ನಮ್ಮಲ್ಲಿ ಅಭಿಮಾನ ವ್ಯಕ್ತಪಡಿಸಿ ನಾಲ್ಕು ಮಾತುಗಳನ್ನು ಇಲ್ಲಿ ವ್ಯಕ್ತಪಡಿಸಲು ನನಗೆ ಅವಕಾಶ ಮಾಡಿಕೊಟ್ಟ ಸಂಘದ ಅಧ್ಯಕ್ಷ ಹಾಗೂ ಕಾರ್ಯದರ್ಶಿಯವರ ವಿಶ್ವಾಸವನ್ನು ಸ್ಮರಿಸುತ್ತೇನೆ.

**ವಿದ್ವಾನ್ ಟಿ.ಜಿ. ಮುಡೂರು, ಎಂ.ಎ., ಬಿ.ಎಡ್.**
**ಪಂಜ, ದ. ಕನ್ನಡ**

# ಸಂಪಾದಕೀಯ

ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಗೌಡ ಜನಾಂಗದ ಸಂಸ್ಕೃತಿಯ ಸಂಕಲನದಲ್ಲಿ ಸಂಪಾದಕೀಯವಾಗಿ ನಮ್ಮ ಉದ್ದೇಶ ಮತ್ತು ಇಚ್ಛೆಯನ್ನು ವ್ಯಕ್ತಪಡಿಸುತ್ತಿರುವೆವು. ಇದು ನಮ್ಮ ಸಂಸ್ಕೃತಿಯ ಶಾಸ್ತ್ರ ಸಂಪ್ರದಾಯಗಳ ಪೂರ್ಣ ವಿವರಗಳ ಮೂಲ ಪ್ರಕಟಣೆಯಾಗಿದೆ. ಹುಟ್ಟಿನಿಂದ ಸಾಯುವ ತನಕ ಮತ್ತು ಸತ್ತ ನಂತರವೂ ಸಹಜಾತಿಯ ಸಂಪ್ರದಾಯಗಳಿಗನುಣವಾಗಿ ಆಚಾರ, ವಿಚಾರ, ನಡೆ, ನುಡಿಗಳನ್ನು ಅನುಸರಿಸಿಕೊಂಡು ಬರುವಂತೆ ಬರೆದುದಾಗಿದೆ.

ಈ ಸಂಸ್ಕೃತಿಯ ಸಂಕಲನವು ಅನುಭವಿ ಹಾಗೂ ನುರಿತ ಸಂಪ್ರದಾಯಗಳಿಂದ ಸಂಗ್ರಹಿಸಿದುದಾಗಿದೆ. ಈ ಸಂಸ್ಕೃತಿಯ ಸಂಕಲನದಲ್ಲಿ ಸ್ವಲ್ಪ ಮಟ್ಟಿನ ಸುಧಾರಿತ ಕ್ರಮವೂ ಇದೆ. ಸುಧಾರಿತ ಕ್ರಮವೆಂದು ನಡೆದು ಬರುವ ಪದ್ಧತಿಗಳನ್ನು ಸಂಕುಚಿತ ಮನೋಭಾವದಿಂದ ತೊಡೆದು ಹಾಕಲು ಸಾಧ್ಯವಿಲ್ಲ. ಉದಾ:- ಋತುಶಾಂತಿ ಲಗ್ನವು ಬಹಳ ಹಿಂದಿನ ಆಚರಣೆ. ಇದನ್ನು ಮುತ್ತೈದೆಯರು ಸೇರಿ ರಹಸ್ಯವಾಗಿ ಆಚರಿಸುವುದು ಸೂಕ್ತ.

ಪ್ರಸ್ತುತ ನಮ್ಮಲ್ಲಿ ವಿವಾಹ ಸಮಾರಂಭಗಳನ್ನು ಶಾಸ್ತ್ರೀಯವಾಗಿ ಆಚರಿಸಿದರೂ ಪ್ರತ್ಯೇಕ ಕೊಡಗಿನ ಕಡೆಗಳಲ್ಲಿ ಮದ್ಯ, ಮಾಂಸಗಳ ಬಳಕೆಯು ಅನಿವಾರ್ಯವಾಗಿದೆ. 'ಇದು ನಮ್ಮ ಸಮಾಜದ ಪದ್ಧತಿಯಲ್ಲಿ ನಿಷಿದ್ಧ' 'ಸಂಸರ್ಗೋ ದೋಷಗುಣೋರ್ಭವಂತಿಃ' ಎಂಬ ಹಾಗೆ ನಮ್ಮಲ್ಲಿ ಸಂಪರ್ಕದಿಂದಾಗಿ ಕೆಲವು ಕ್ರಮಗಳು ಬಂದುದಾಗಿದೆ. ಆಸೆ ಆಮಿಷ ಆಡಂಬರಗಳಿಗೆ ಬಲಿಯಾಗದೆ ಸಂಸ್ಕೃತಿಯ ಶ್ರೇಷ್ಠತೆಯನ್ನು ಕಾಪಾಡಿ.

ಆಡಂಬರಕ್ಕಾಗಿ ಒಬ್ಬರ ಪದ್ಧತಿಗೆ ಬಲಿಬಿದ್ದರೆ ಐಶ್ವರ್ಯಕ್ಕಾಗಿ ಇನ್ನೊಬ್ಬರ ಪದ್ಧತಿಗೆ ಶರಣಾಗತಿ. 'ವರದಕ್ಷಿಣೆ' (ಬದಿ) ನಮ್ಮ ವಿವಾಹ ಪದ್ಧತಿಯಲ್ಲಿ ಸ್ವೀಕರಿಸುವಂತಿಲ್ಲ. ನಾವು ಶೃಂಗೇರಿ ಮಠದಿಂದ ಹಿಡಿದು ಹೆಣ್ಣಿನ ಮನೆಯಲ್ಲಾಗುವ ಎಲೆ-ಅಡಿಕೆ ಖರ್ಚು, ಸ್ಥಳ ಮರ್ಯಾದೆ ಎಲ್ಲವನ್ನು ತೆರವಿನ ರೂಪದಲ್ಲಿ ಹೆಣ್ಣಿನ ಕಡೆಯವರಿಗೆ ಕಾಣಿಕೆ ಸಲ್ಲಿಸಿ ಹೆಣ್ಣು ತರಬೇಕೇ ವಿನಹಃ ಪರರ ಸೊತ್ತಿಗೆ ಆಸೆಪಟ್ಟು ಅವರ ಗುಲಾಮರಾಗುವುದಕ್ಕಲ್ಲ. ವರದಕ್ಷಿಣೆಯು ಸಂಪೂರ್ಣವಾಗಿ ನಿಲ್ಲಬೇಕು.

ಆಗ ಎಷ್ಟೋ ತಂದೆ ತಾಯಂದಿರಿಗೆ ಕನ್ಯಾದಾನ ಮಾಡಿದ ಫಲ ಬೇಗನೆ ಲಭಿಸಬಹುದು.

ಗೌಡ ಜನಾಂಗದವರಿಗೆ ಒಂದೆ ಭಾಷೆ, ಒಂದೇ ಆಚಾರ, ಒಂದೇ ವಿಚಾರ, ಉಡಿಗೆ, ತೊಡಿಗೆಗಳು ಇರುವುದಿಲ್ಲ. ಮಾತೃಭಾಷೆಯನ್ನು ಮರೆತು ಪರಭಾಷೆಯನ್ನು ಸ್ವೀಕರಿಸಿದ್ದಾರೆ.

ಒಕ್ಕೂಟಕ್ಕಾಗಿ ಹಿರಿಯರಿಂದ ನಡೆದು ಬಂದ ಕೆಲವೊಂದು ಆಚರಣೆಗಳನ್ನು ಬಿಡಕೂಡದು. 10 ಕುಟುಂಬ 18 ಗೋತ್ರಕ್ಕೆ ಸೇರಿದ ಸ್ವಜಾತಿ ಗೌಡ ಜನಾಂಗದ ಆತ್ಮೀಯತೆ ಬೆಳೆಯಲಿ.

ಸಂಸ್ಕೃತಿಯ ಸಂಕಲನದಲ್ಲಿ ಸುಧಾರಣೆ ಇರಬಹುದು. ಅಭಿಪ್ರಾಯಗಳಲ್ಲಿ ವ್ಯತ್ಯಾಸವು ಇರಬಹುದು. ಅಭಿಪ್ರಾಯದಲ್ಲಿ ಇನ್ನೂ ಹೆಚ್ಚಿನ ವಿಷಯ ತಿಳಿದವರು ಕಾರ್ಯದರ್ಶಿ, ಕೊಡಗು ಗೌಡ ವಿದ್ಯಾಸಂಘ ಇವರಿಗೆ ಕಳುಹಿಸಿಕೊಟ್ಟಲ್ಲಿ ಸಂಪಾದಕ ಮಂಡಳಿಯ ಸುಧಾರಿತ ಮತ್ತು ಸಮಂಜಸವಾದುದನ್ನು ಮುಂದಿನ ಮುದ್ರಣದಲ್ಲಿ ಸೇರಿಸಿಕೊಳ್ಳಲು ಸಹಾಯಕವಾಗುತ್ತದೆ. ಗೌಡ ಜನಾಂಗದ ಪ್ರತಿಯೊಬ್ಬರೂ ಈ ಸಂಸ್ಕೃತಿಯ ಪದ್ಧತಿಗಳನ್ನು ಅಭ್ಯಸಿಸಿ ಆಚರಿಸಿಕೊಂಡು ಬರಲು ನೆರವಾಗಲೆಂದು ಆಶಿಸಿ, ನಮ್ಮ ಗೌಡ ಜನಾಂಗದ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗಬೇಕಾಗಿ ವಿನಂತಿ.

ಈ ಸಂಸ್ಕೃತಿಯ ಸಂಕಲನಕ್ಕಾಗಿ ಶಾಸ್ತ್ರ ಸಂಪ್ರದಾಯಗಳ ವಿಷಯ ಸಂಗ್ರಹಿಸಲು ಹೋದಾಗ, ಪತ್ರ ಮುಖೇನ ಬರೆದು ವಿನಂತಿಸಿಕೊಂಡಾಗ ತಮ್ಮ ಕೆಲಸ ಕಾರ್ಯಗಳನ್ನು ಬದಿಗೊತ್ತಿ ಸಂಸ್ಕೃತಿಯ ಪುಸ್ತಕ ನಮ್ಮ ಸಮಾಜಕ್ಕೂ ಬೇಕು ಎಂಬ ಮಹದಾಕಾಂಕ್ಷೆಯನ್ನು ವ್ಯಕ್ತಪಡಿಸಿ ಶಾಸ್ತ್ರ ಸಂಪ್ರದಾಯಗಳನ್ನು ಕೂಲಂಕುಷವಾಗಿ ತಿಳಿಯ ಹೇಳಿದವರಿಗೆ, ನಮಗಾಗಿ ಇತರರಿಂದ ತಿಳಿದು ಪತ್ರ ಮುಖೇನ ತಿಳಿಸಿದ ನಮ್ಮ ಬಂಧುಗಳಿಗೆ, ಸಮಯಕ್ಕೆ ಸರಿಯಾಗಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀದೇವಿ ಪ್ರಿಂಟರ್ಸ್ ಮತ್ತು ಅವರ ಸಹಾಯಕ ಸಿಬ್ಬಂದಿ ವರ್ಗಕ್ಕೂ ನಮ್ಮ ಕೊಡಗು ಗೌಡ ವಿದ್ಯಾಸಂಘದ ವತಿಯಿಂದ ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತೇವೆ.

– ಸಂಪಾದಕ

# ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ.

## 1984–85ನೇ ಸಾಲಿನ ಆಡಳಿತ ಮಂಡಳಿ

| | | |
|---|---|---|
| 1) | ಕುದುಪಜೆ ಬಿ. ಕೃಷ್ಣಪ್ಪ, ಎಂ.ಎ., ಬಿ.ಎಲ್., | ಅಧ್ಯಕ್ಷರು |
| 2) | ಹೊಸೂರು ಡಿ. ಜೋಯಪ್ಪ | ಉಪಾಧ್ಯಕ್ಷರು |
| 3) | ಆಜಡ್ಕ ಎಂ. ಕೃಷ್ಣಪ್ಪ | ಕಾರ್ಯದರ್ಶಿ |
| 4) | ಪಾರುಪಾಡಿ ಕೃಷ್ಣಪ್ಪ, ಬಿ.ಎ., ಬಿ.ಎಲ್., | ಖಜಾಂಚಿ |
| 5) | ಚೆಟ್ಟಿಮಾಡ ಎ. ರವೀಂದ್ರ, ಬಿ.ಎಸ್ಸಿ., ಎಲ್.ಎಲ್.ಬಿ. | ಕಾನೂನು ಸಲಹೆಗಾರರು |
| 6) | ಪರ್ಲಕೋಟಿ ಟಿ. ಗೋಪಾಲಕೃಷ್ಣ, ಬಿ.ಕಾಂ.,ಎಲ್.ಎಲ್.ಬಿ., | ಲೆಕ್ಕಪರಿಶೋಧಕರು |
| 7) | ಪೇರಿಯನ ಸಾವಿತ್ರಿ ಕೇಶವ, ಬಿ.ಎ., | ಸದಸ್ಯರು |
| 8) | ಪಂಜಿಪಳ್ಳ ಇಂದ್ರಾಕ್ಷಿ ವೆಂಕಪ್ಪ | " |
| 9) | ಪಂಜಿಪಳ್ಳ ವೆಂಕಪ್ಪ | " |
| 10) | ಪಟ್ಟಡ ಎಂ. ಪ್ರಭಾಕರ್, ಬಿ.ಕಾಂ., | " |
| 11) | ಕೋಳುಮುಡಿಯನ ಆರ್. ಅನಂತಕುಮಾರ್, ಬಿ.ಎ., | " |
| 12) | ಕೋರನ ಡಬ್ಲ್ಯು. ವಿಶ್ವನಾಥ, ಬಿ.ಎ., | " |
| 13) | ದಂಬೆಕೋಡಿ ಎಸ್. ಮಾದಪ್ಪ, ಬಿ.ಇ., | " |
| 14) | ಬಾಡನ ಎ. ಅಶೋಕ ಕುಮಾರ್,ಬಿ.ಎಸ್ಸಿ., ಎಲ್.ಎಲ್.ಬಿ. | " |
| 15) | ಬೈಮನ ರಾಘವಯ್ಯ | " |
| 16) | ಮುದ್ಯನ ಪಿ. ಬೆಳ್ಯಪ್ಪ, ಬಿ.ಎಸ್ಸಿ., ಬಿ.ಎಡ್., | " |
| 17) | ಮೂಟ್ಟೆರ ಬಿ. ಜಗದೀಶ | " |
| 18) | ಸೂರ್ತಲೆ ಆರ್. ಸೋಮಣ್ಣ, ಬಿ.ಎ., | " |
| 19) | ಯಾಲದಾಳು ಡಿ. ಮೋಹನ್, ಬಿ.ಎ., | " |

ಹಾಗೂ

ಚೆಟ್ಟಿಮಾಡ ಪಿ. ರಘುಪತಿ, ವ್ಯವಸ್ಥಾಪಕರು
ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ

ಗೂಡಂಜಿರ ಕಾಳಪ್ಪ, ವ್ಯವಸ್ಥಾಪಕರು
ಕೊಡಗು ಗೌಡ ವಿದ್ಯಾರ್ಥಿನಿಲಯ, ಜಯಲಕ್ಷ್ಮಿಪುರ ಬಡಾವಣೆ, ಮೈಸೂರು.

# ॥ ಶ್ರೀ ವೆಂಕಟೇಶ ಸ್ತುತಿಃ ॥

ಲಕ್ಷ್ಮೀ ಸಾನ್ನಿಧ್ಯಪ್ರಸನ್ನೋತ್ಫುಲ್ಲಾನನ ವೆಂಕಟೇಶ ।
ಪದಾರವಿಂದಾನುಗ್ರಹರಜೋಲಾಭೇಪ್ಸಯಾ ತವ ॥
ಭಕ್ತ್ಯಾ ಕೃತಕರಾಂಜಲೀನ್ ಸತ್ಯ ಧರ್ಮಾಸಕ್ತ ಮುಗ್ಧಾನ್ ।
ಸಾಷ್ಟಾಂಗ ಪ್ರಣಿಪತಿತಗೌಡಾನ್ ರಕ್ಷ ಸರ್ವಾನ್ ಪ್ರಭೇ ॥೧॥

ವಸುಂಧರಾಮಮೃತದಾಂ ಸಂಪೂಜ್ಯ ಕೃಷಿಕರ್ಮಣಾ ।
ಏಲಾಕ್ರಮುಕ ಶಾಲೀಕ್ಷು ಕಲ್ಪತರು ಕಾಫ್ಯಾದಿನಾ ॥
ಕೃತ್ವಾ ಸಸ್ಯಶ್ಯಾಮಾಂ ತಸ್ಯಾಃ ಕ್ರೋಡಕಮಠೇ ಶಯಾನಃ ।
ಪ್ರಾರ್ಥಯತೇ ಗೌಡಜನೋ ತವಾಪಾಂಗ ದೃಷ್ಟಿಂ ಪ್ರಭೇ ॥೨॥

ಆವಿಶ್ರಾಂತಿರುದಯತಃ ಕ್ರಿಯಮಾಣೇಷು ಕರ್ಮಸು ।
ಲಕ್ಷ್ಯ ಹೀನೇನಾಪರಾದ್ಧಂ ಮನೋವಾಚಾ ಕೃತಂ ಸರ್ವಂ ॥
ಕ್ಷಮಸ್ವ ಕೃಪಯಾ ನಿತ್ಯಂ ಜ್ಞಾನಧ್ಯಾನಾದಿ ಸಂಪದಾಂ ।
ಅಜ್ಞಬಾಲ ಪ್ರಾರ್ಥಯೇ ಹಂ ಯಚ್ಛ ಸಿದ್ಧಿಂ ಮಹಾಪ್ರಭೇ ॥೩॥

# ಭಾಗ – 1
# ಗೌಡರ ಪರಿಚಯ

ಗೌಡರು ಎಂದರೆ ಭೂಮಿಗೆ ಒಡೆಯರು ಮತ್ತು ಊರಿಗೆ ಮುಖ್ಯಸ್ಥರು ಎಂದರ್ಥ. 'ಊರಿಗೊಬ್ಬ ಗೌಡ, ದೇಶಕೊಬ್ಬ ದೊರೆ' ಇದು ಕನ್ನಡದ ನಾಡನುಡಿ, 'ಗೌಡ' ಎಂಬುದು ಹಿಂದಿನ ಕಾಲದಲ್ಲಿ ಪ್ರಚಲಿತವಾಗಿದ್ದ ಒಂದು ಸಂಸ್ಕೃತಿ ಎಂದು ಹೆಸರು. ಗೌಡ ಸಂಸ್ಕೃತಿಯು ಒಂದೇ ಸ್ಥಳದ ಸಂಸ್ಕೃತಿಯಾಗಿರದೆ ಹಲವಾರು ಸ್ಥಳಗಳ, ಜನರ ಮಿಲನದ ಫಲವೇ ಗೌಡ ಸಂಸ್ಕೃತಿಯಾಗಿರುವುದು.

ಗೌಡ ಜನಾಂಗದವರು ಹಿಂದುಗಳು ಹಾಗೂ ತಿರುಪೆತಿ ವೆಂಕಟರಮಣ ದೇವರ ಭಕ್ತರು. ವೆಂಕಟರಮಣ ದೇವರನ್ನು ತಮ್ಮ ಕುಲದೇವರೆಂದು ಪೂಜಿಸುವರು. ಅಲ್ಲದೆ 'ಹರಿಸೇವೆ' ಎಂಬ ಪೂಜೆಯನ್ನು ಪ್ರತಿ ಕುಟುಂಬದಲ್ಲಿ ಆಚರಿಸುವರಲ್ಲದೆ ಈ ಪೂಜೆಯ ಹರಿಕೆ, ಭಕ್ತಿ ಹಣವನ್ನು ತಿರುಪತಿ ವೆಂಕಟರಮಣ ದೇವರ ಹಣವೆಂದು 'ಮುಡಿಪಿ'ನಲ್ಲಿ ಕಟ್ಟಿಟ್ಟು ತಿರುಪತಿಯ ಭಂಡಾರಕ್ಕೆ ತಲುಪಿಸುವ ಕ್ರಮ ರೂಢಿಯಲ್ಲಿದೆ. ಕೆಲವರಿಗೆ 'ದುರ್ಗಿ' ಕುಲದ್ಯೆವ, ಇನ್ನು ಕೆಲವರಿಗೆ ಸಬ್ಬಮ್ಮ (ಶರ್ವಾಂಭೆ) ಮನೆ ದೇವರು, ಕೆಲವು ಕುಟುಂಬದವರು ಭೂತಾರಾಧಕರು. ಇವುಗಳೆಲ್ಲ ಆಚರಣೆಯಿಂದ ಬಂದ ಭಕ್ತಿ ಮಾರ್ಗಗಳು.

ಗೌಡರು ವಿಜಯನಗರ ಸಾಮ್ರಾಜ್ಯದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಇದ್ದರೆಂದು ಚರಿತ್ರೆಯಿಂದ ತಿಳಿದು ಬಂದಿದೆ. ತಾಳಿಕೋಟೆಯ ಕದನದಲ್ಲಿ ವಿಜಯನಗರ ಸಾಮ್ರಾಜ್ಯ ಪತನವಾದನಂತರ ಮುಸ್ಲಿಮರ ಆಳ್ವಿಕೆಗೆ ಇಷ್ಟಪಡದೆ ಅಲ್ಲಿಂದ ಇಕ್ಕೇರಿ ಸಂಸ್ಥಾನಕ್ಕೆ ಬಂದರೆಂದು ಇತಿಹಾಸದಿಂದ ತಿಳಿದು ಬಂದಿದೆ.

ಇಕ್ಕೇರಿ ನಾಯಕರು ದಕ್ಷಿಣ ಕನ್ನಡ ಜಿಲ್ಲೆಯ ಆದಿ ರಾಜರಾದ ಮೇಲೆ ತಮ್ಮ ಇಕ್ಕೇರಿ ಸಂಸ್ಥಾನದ ಐಗೂರು ಸೀಮೆಯಿಂದ ಗೌಡ ಜನಾಂಗವನ್ನು ದಕ್ಷಿಣ ಕನ್ನಡ ಜಿಲ್ಲೆಯ ಘಟ್ಟದ ಸರಹದ್ದು ಪ್ರವೇಶಕ್ಕೆ ತಂದು ಅಲ್ಲಿ ಭೂಮಿಕೊಟ್ಟು ನಿಲ್ಲಿಸಿದರೆಂದು ತಿಳಿದು ಬರುತ್ತದೆ. ಗೌಡ ಜನಾಂಗದವರು ಭತ್ತದ ಗದ್ದೆ ಮತ್ತು ತೋಟದ ವ್ಯವಸಾಯಗಳಲ್ಲಿ ಬಹಳ ನುರಿತವರಾದ್ದರಿಂದ ಅವರನ್ನು ದಕ್ಷಿಣ ಕನ್ನಡ ಜಿಲ್ಲೆಯ ಜನವಿರಳ ಪ್ರದೇಶಗಳಾದ ಪುತ್ತೂರು ತಾಲ್ಲೂಕು ಮತ್ತು ಈಗಿನ ಸುಳ್ಯ ತಾಲ್ಲೂಕಿಗೆ ಬಂದು ನೆಲಸಲು ಇಕ್ಕೇರಿ ನಾಯಕರು ಪ್ರೋತ್ಸಾಹಿಸಿದ ಕಾರಣ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂದು ನೆಲೆಸಿ ಕೃಷಿಯನ್ನು ಪ್ರಾರಂಭಿಸುವಂತಾಯಿತು.

ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿದ್ದ ಗೌಡರಲ್ಲಿ ಕೆಲವರು ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಮತ್ತು ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಕೊಡಗಿಗೆ ಬಂದು ನೆಲೆಸಿದರು. ಕೊಡಗಿಗೆ ಗೌಡ ಜನಾಂಗದವರು ಬಂದು ನೆಲೆಸಲು ಪ್ರೋತ್ಸಾಹಿಸಿದವರು ಕೊಡಗಿನ ಹಾಲೇರಿ ಅರಸರಲ್ಲಿ ಪ್ರಖ್ಯಾತರಾದ ದೊಡ್ಡ ವೀರರಾಜೇಂದ್ರ ಒಡೆಯರು. ಕೊಡಗು ಟಿಪ್ಪು ಸುಲ್ತಾನನ ಆಳ್ವಿಕೆಗೊಳಪಟ್ಟ ನಂತರ ಟಿಪ್ಪು ಸುಲ್ತಾನನ ಆಳ್ವಿಕೆಯನ್ನು ವಿರೋಧಿಸಿ ಕೊಡಗಿನವರು ಅನೇಕ ಬಾರಿ ದಂಗೆಯೆದ್ದರು. ಇದರಿಂದ ಟಿಪ್ಪು ಸುಲ್ತಾನನು ಕೊಡಗಿನ ಜನರ ಮೇಲೆ ಸಿಟ್ಟಾಗಿ 1785ರಲ್ಲಿ ತಾನೇ ಕೊಡಗಿಗೆ ದೊಡ್ಡ ದಂಡು ತೆಗೆದುಕೊಂಡು ಬಂದು ಕೊಡಗಿನ ಜನರನ್ನೆಲ್ಲಾ ಬಲತ್ಕಾರದಿಂದ ಹಿಡಿದು ಭಾಗಮಂಡಲದ ದೇವಟು ಪರಂಬುವಿನಲ್ಲಿ ಸೇರಿಸಿ ಸುಮಾರು 80 ಸಾವಿರ ಜನರನ್ನು ಶ್ರೀರಂಗಪಟ್ಟಣಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಮುಸಲ್ಮಾನರನ್ನಾಗಿ ಮತಾಂತರಿಸಿದನೆಂದು ಟಿಪ್ಪು ಸುಲ್ತಾನನ ಚರಿತ್ರೆಕಾರ ಮೀರ್‌ಹುಸೇನ್ ಆಲಿ ಕಿರ್ಮಾನಿ ಬರೆದಿರುತ್ತಾರೆ.

ಇಷ್ಟು ದೊಡ್ಡ ಸಂಖ್ಯೆಯ ಜನರನ್ನು ಕೊಡಗಿನಿಂದ ಮೈಸೂರಿಗೆ ಸಾಗಿಸಲ್ಪಟ್ಟ ಮೇಲೆ ಇಲ್ಲಿನ ಭೂಮಿಗಳಲ್ಲಿ ಹೆಚ್ಚಿನವು ವ್ಯವಸಾಯ ಮಾಡುವವರಿಲ್ಲದೆ ಪಾಳು ಬಿದ್ದವು. 1792ರಲ್ಲಿ ಅಮರ ಸುಳ್ಯ ಮಾಗಣೆಗಳು ವೀರರಾಜೇಂದ್ರನ ವಶಕ್ಕೆ ಬಂದವು. ಆಗ ವೀರರಾಜೇಂದ್ರನು ಅಮರ ಸುಳ್ಯ ಗೌಡ ಜನಾಂಗವನ್ನು ಕೊಡಗಿಗೆ ಬಂದು ಇಲ್ಲಿ ಪಾಳು ಬಿದ್ದಿದ್ದ ಭೂಮಿಗಳಲ್ಲಿ ನೆಲೆಸುವಂತೆ ಒತ್ತಾಯಿಸಿದರು. ಹೀಗೆ ಹೊಸ ಪ್ರದೇಶಗಳಿಂದ ಬಂದ ಎಲ್ಲಾ ಜನರಿಗೂ ದೊಡ್ಡ ವೀರರಾಜೇಂದ್ರ ಒಡೆಯರು ಜಮ್ಮ ಮತ್ತು ಉಂಬಳಿಯಾಗಿ ಭೂಮಿಯನ್ನು ಕೊಟ್ಟರು. ಕೊಡಗಿನಲ್ಲಿ ಗೌಡ ಜನರು ದಕ್ಷಿಣ ಕನ್ನಡ ಜಿಲ್ಲೆಯ ಗಡಿಗೆ ಮುಟ್ಟಿಕೊಂಡಿರುವ ಭಾಗಮಂಡಲ ನಾಡು, ನಾಪೋಕ್ಲು ನಾಡು, ಮಡಿಕೇರಿ ನಾಡುಗಳಲ್ಲಿ ಹೆಚ್ಚಾಗಿ ನೆಲೆಸಿರುವುದು ಕಂಡುಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ಹೆಚ್ಚಿನ ಜನರು ತೊಡಿಕಾನ, ಪಟ್ಟಿ ಮಾರ್ಗವಾಗಿ ಬಂದು ಭಾಗಮಂಡಲ ಮತ್ತು ನಾಪೋಕ್ಲು ನಾಡುಗಳಲ್ಲಿ ನೆಲೆಸಿದರು. ಸಂಪಾಜೆ ಮಾರ್ಗವಾಗಿ ಬಂದ ಜನರು ಮಡಿಕೇರಿ ನಾಡಿನಲ್ಲಿ ನೆಲೆಸಿದರು. ಸುಬ್ರಹ್ಮಣ್ಯ, ಕಡಮಕಲ್ಲು ಮಾರ್ಗವಾಗಿ ಬಂದ ಜನರು ಗಾಳಿಬೀಡು ಮತ್ತು ಮಡಿಕೇರಿ ನಾಡುಗಳಲ್ಲಿ ನೆಲೆಸಿದರು. ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬಂದು ನೆಲೆಸಿದ ಗೌಡ ಜನಾಂಗದವರು 1799 ರಿಂದ 1808ರವರೆಗೆ ಹೆಚ್ಚಾಗಿ ನೆಲೆಸಿದರು. ಅವರು ನೆಲೆನಿಂತ ಭೂಮಿಯನ್ನು ಅವರಿಗೆ ಜಮ್ಮ ಅಥವಾ ಉಂಬಳಿಯಾಗಿ ವೀರರಾಜೇಂದ್ರ ಒಡೆಯರು 1808ರ ಸುಮಾರಿಗೆ ಕೊಟ್ಟಿರುವುದೆಂದು ಚರಿತ್ರೆಯಿಂದ ತಿಳಿದು ಬರುತ್ತದೆ.

ಹೀಗೆ ದಕ್ಷಿಣ ಕನ್ನಡದಿಂದ ಕೊಡಗಿಗೆ ಬಂದು ನೆಲೆಸಿದ ಗೌಡ ಜನಾಂಗದವರು ಹೆಚ್ಚಾಗಿ ಕೊಡಗಿನ ಪಶ್ಚಿಮ ಭಾಗದಲ್ಲಿ ನೆಲೆಸಿದರು ಮತ್ತು ಕೊಡಗಿನ ರಾಜರು ಅವರಿಗೆ ಜಮ್ಮ, ಜಹಾಗೀರು, ಉಂಬಳಿ ಭೂಮಿಗಳನ್ನು ಕೊಟ್ಟರು. ಕ್ರಮೇಣ ಮಡಿಕೇರಿ ತಾಲ್ಲೂಕಿನ ಗೌಡರು ಸ್ವಲ್ಪ ಭಾಗ ವೀರಾಜಪೇಟೆ ತಾಲ್ಲೂಕಿನಲ್ಲಿ ನೆಲೆಸಿದರು. ಹೆಚ್ಚಿನವರು ಸೋಮವಾರಪೇಟೆ ತಾಲ್ಲೂಕಿನಲ್ಲಿ ನೆಲೆಸಿ ಕೊಡಗಿನ ಸ್ಥಿರವಾಸಿಗಳಾದರು. ಅನಂತರ ಕೆಲವರು ಉದ್ಯೋಗ ನಿಮಿತ್ತ ಮೈಸೂರು, ಬೆಂಗಳೂರು, ರಾಜ್ಯದ ಮತ್ತು ರಾಷ್ಟ್ರದ ಬೇರೆ ಬೇರೆ ಭಾಗಗಳಲ್ಲಿ ಪ್ರಸ್ತುತ ನೆಲೆಸಿರುವುದು ಕಂಡುಬರುತ್ತದೆ. ಹೀಗೆ ಹಲವಾರು ವರ್ಷಗಳಿಂದ ಗೌಡ ಜನಾಂಗದವರು ವಿದ್ಯಾಭ್ಯಾಸದಲ್ಲಿ ಮುಂದುವರಿದು ಉದ್ಯೋಗಗಳನ್ನವಲಂಭಿಸಿ ಜೀವನ ಸಾಗಿಸುತ್ತಿರುವರು.

ಗೌಡ ಜನಾಂಗದವರು ಹತ್ತು ಬುಡಕಟ್ಟಿಗೆ ಸೇರಿದವರು ಮತ್ತು ಹದಿನೆಂಟು ಗೋತ್ರ (ಬಳಿ)ಗಳಿಗೆ ಸೇರಿದವರಾದ್ದರಿಂದ ಈಗಲೂ ವಿವಾಹ ಸಮಾರಂಭಗಳಲ್ಲಿ 'ಹತ್ತು ಕುಟುಂಬ ಹದಿನೆಂಟು ಗೋತ್ರ, ಜಾತಿ ಸಭೆ ಸಮಸ್ತರ ಸಂಗಡ ಕೇಳಿ' ಎಂದು ಹೇಳಿ ಎಲ್ಲಾ ಕಾರ್ಯಗಳನ್ನು ಪ್ರಾರಂಭಿಸುತ್ತಾರೆ.

ಗೌಡ ಜನಾಂಗದವರಿಗೆ ಕುಲಗುರು ಶೃಂಗೇರಿ ಜಗದ್ಗುರುಗಳು, ಹಿರಿಯರ ಕಾಲದಲ್ಲಿ ಶೃಂಗೇರಿ ಮಠದ ಗುರುಗಳಿಗೆ ಗುರುಕಾಣಿಕೆ ಕೊಡುವ ಕ್ರಮವಿತ್ತು. ಈ ಗುರುಕಾಣಿಕೆಯನ್ನು ಕಟ್ಟಿ ಗುರುಗಳಿಂದ ಆಶೀರ್ವಾದ ಪಡೆದು ತನ್ನ ಕುಲದ ಪದ್ಧತಿ ಮೇರೆ ಶುಭಾಶುಭ ಕಾಲಗಳಲ್ಲಿ ನಮ್ಮ ಗೌಡ ಜನಾಂಗದವರು ಹೇಗೆ ನಡೆದುಕೊಳ್ಳಬೇಕೆಂದು ಅಭಿಪ್ರಾಯ ಆಶೀರ್ವಾದ ಪಡೆಯುತ್ತಿದ್ದರು. ಈಗಲೂ ವಿವಾಹ ಸಮಾರಂಭಗಳಲ್ಲಿ 'ತೆರ' ಎಂದು ಗಂಡಿನ ಕಡೆಯುವರು ಹೆಣ್ಣಿಗೆ ಕೊಡುವ ಹಣದಲ್ಲಿ ರೂ. 4.50ನ್ನು ಹೆಣ್ಣಿನ ಮುತ್ತೈದೆತನಕ್ಕೆ ಶೃಂಗೇರಿ ಮಠಕ್ಕೆ ತಲುಪಿಸಬೇಕೆಂದು ಕೊಡುವ ಹಣವಾಗಿದೆ.

ಭತ್ತದ ಕೃಷಿಯು ಗೌಡರ ಹುಟ್ಟನ್ನೇ ಅಪ್ಪಿಕೊಂಡು ಬಂದ ಕೃಷಿಯಾಗಿದೆ. ಅಲ್ಲದೆ ನೇಗಿಲನ್ನೇ ಬಾಳಿನ ಹೆಗ್ಗುರುತಾಗಿ ಮಾಡಿಕೊಂಡಿರುವರು. ಈಗ ಗೌಡ ಜನಾಂಗದವರು ಭತ್ತದ ಕೃಷಿಯನ್ನಲ್ಲದೆ ಕಾಫಿ, ಏಲಕ್ಕಿ, ಕಾಳು ಮೆಣಸು, ಕಿತ್ತಳೆ, ತೆಂಗು, ಅಡಿಕೆ, ಗೇರು, ರಬ್ಬರ್ ಮುಂತಾದ ಕೃಷಿಯನ್ನು ಮಾಡುತ್ತಿರುವರು.

ಗೌಡ ಜನಾಂಗದವರು ಮಾಂಸಾಹಾರಿಗಳು ಮತ್ತು ಅರೆಭಾಷೆ (ಅರೆಗನ್ನಡ) ಮಾತನಾಡುವವರು. ಇವರು ವಿಧೇಯರು 'ಸತ್ಯ ಧರ್ಮ ನ್ಯಾಯ'ದಿಂದ ಬಾಳುವವರು ಮತ್ತು ಸಾಧು ಸ್ವಭಾವದವರು ಅಲ್ಲದೆ ಸ್ವಾತಂತ್ರ್ಯಾಭಿಮಾನಿಗಳು ಸಹ ಆಗಿರುವರು.

# ಗೌಡರ ಆಚಾರ, ವಿಚಾರ, ನಡೆ ನುಡಿ

ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡ ಜನಾಂಗದವರು ಹತ್ತು ಬುಡಕಟ್ಟಿಗೆ ಮತ್ತು ಹದಿನೆಂಟು ಗೋತ್ರಗಳಿಗೆ ಸೇರಿದವರಾಗಿರುತ್ತಾರೆ. ಈ ಹತ್ತು ಬುಡಕಟ್ಟಿಗೆ ಸೇರಿದ ಜನರು ಹೀಗೆ ಬೇರೆ ಬೇರೆ ಕುಟುಂಬದ ಹೆಸರುಗಳನ್ನಿಟ್ಟುಕೊಂಡಿರುವರು. ಆದ ಕಾರಣ ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 400 ಕುಟುಂಬದ ಹೆಸರಿನಿಂದಲೂ ಕೊಡಗಿನಲ್ಲಿ ಸುಮಾರು 350 ಕುಟುಂಬದ ಹೆಸರಿನಿಂದ ಕರೆಯಲ್ಪಡುವುದು. ಕೆಲವು ಕಡೆಗಳಲ್ಲಿ ಆಯಾ ಸ್ಥಳದ ಹೆಸರನ್ನೇ ಕುಟುಂಬದ ಹೆಸರನ್ನಾಗಿ ಇಟ್ಟುಕೊಂಡಿರುವರು. ಇನ್ನು ಕೆಲವು ಕಡೆ ಗೌಡ ಕುಟುಂಬದ ಹೆಸರೇ ಆ ಗ್ರಾಮಕ್ಕಿರುವುದು. ಅಂತೂ ಒಟ್ಟು ಗೌಡ ಕುಟಂಬವು 700 ರಿಂದ 800 ಹೆಸರುಗಳಿಂದ ಕರೆಯಲ್ಪಡುವುದು.

ಗೌಡ ಜನಾಂಗದವರು ಹೆಚ್ಚಾಗಿ ಅರೆಭಾಷೆಯನ್ನೇ ಮಾತನಾಡುತ್ತಾರೆ. ಕೆಲವು ಕಡೆಗಳಲ್ಲಿ ಮಾತ್ರ ತುಳು ಭಾಷೆ, ಕೊಡವ ಭಾಷೆ ಮತ್ತು ಕನ್ನಡ ಭಾಷೆ ಮಾತನಾಡುತ್ತಾರೆ. ಒಂದೇ ಗೋತ್ರದೊಳಗೆ ಪರಸ್ಪರ ವಿವಾಹವು ನಿಷಿದ್ಧವಾಗಿದೆ.

**ಉಡಿಗೆ ತೊಡಿಗೆಗಳು**

ಗೌಡ ಜನಾಂಗದ ಪುರುಷರು ಹೆಚ್ಚಾಗಿ ಶರ್ಟು, ಪಂಚೆ, ಕೋಟು, ಪ್ಯಾಂಟ್, ಟೋಪಿ, ರುಮಾಲು, ಶಾಲುಗಳನ್ನು ಧರಿಸುವರು. ವಿವಾಹ ಸಮಾರಂಭಗಳಲ್ಲಿ ಮಾತ್ರ ಕಡ್ಡಾಯವಾಗಿ ವರನು ಬಿಳಿ ಶರ್ಟು, ಕಚ್ಚೆ ಹಾಕಿ ಪಂಚೆಯನ್ನುಟ್ಟು ಶಾಲು ಹಾಕುವರು ಮತ್ತು ಕೆಲವರು ಬಿಳಿ ಕೋಟು, ಟೈಯನ್ನು ಧರಿಸುವರು. ಅಲ್ಲದೆ ತಲೆಗೆ ಪೇಟ, ರುಮಾಲು ಕಟ್ಟುವರು.

ಹಿಂದಿನವರು ಹೆಚ್ಚಾಗಿ ಕಿವಿಗೆ ಒಂಟಿ ಯಾ ಕಡಕು ಎಂಬ ಚಿನ್ನದ ಆಭರಣವನ್ನು ಹಾಕಿಕೊಂಡಿರುವರು. ಈಗ ಅದು ಕಡಿಮೆಯಾಗಿದೆ.

ಸ್ತ್ರೀಯರು ಹೆಚ್ಚಾಗಿ ಸೆರಗು ಹಾಕಿ ಸೀರೆಯನ್ನುಡುವರು. ಕೊಡಗಿನಲ್ಲಿ ವಯಸ್ಕರು ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಸ್ತ್ರೀಯರು ಗೇಂಟಿ ಕಟ್ಟಿ ಸೀರೆಯನ್ನುಡುವರು. ಹಾಗೆ ಸೀರೆ ಉಡುವವರು ಉದ್ದ ಕೈಉಳ್ಳ ಜಾಕೇಟು (ರವಕೆ)ಯನ್ನು ಧರಿಸುತ್ತಾರೆ. ಗೌಡ ವಿವಾಹಿತ ಸ್ತ್ರೀಯರ ಶ್ರೇಷ್ಠವಾದ ಆಭರಣವೆಂದರೆ ತಾಳಿ (ಮಾಂಗಲ್ಯ) ಅದನ್ನು ನಿತ್ಯವೂ ಕುತ್ತಿಗೆಯಲ್ಲೇ ಧರಿಸಿಕೊಂಡಿರಬೇಕೆಂಬ ನಿಯಮವಿದೆ. ಮುತ್ತೈದೆ

ಹೆಂಗಸು ತಾಳಿ ಇಲ್ಲದೆ ಮೂಡಣ ಕಟ್ಟಳೆ ದಾಟಬಾರದೆಂದೂ ಮತ್ತು ಪತಿಗೆ ಊಟ ಬಳಸಬಾರದೆಂಬ ನಿಯಮಗಳು ಆಚರಣೆಯಲ್ಲಿದೆ.

ವಿವಾಹಿತ ಸ್ತ್ರೀಯರು ಕೈಗೆ ಗಾಜಿನ ಬಳೆಯನ್ನು ಹಾಕಿಕೊಂಡಿರಬೇಕೆಂಬ ನಿಯಮವಿದೆ. ನವವಧುವಿಗೆ ಬಳೆ ತೊಡಿಸುವುದು ಮದುವೆಯ ಮೊದಲ ಶುಭ ಕಾರ್ಯ. ಹೆಣ್ಣು ಮಕ್ಕಳಿಗೆ ಚಿಕ್ಕಂದಿನಿಂದಲೇ ಕಿವಿ, ಮೂಗು ಚುಚ್ಚಿರುತ್ತಾರೆ. ಕಿವಿಗೆ ಓಲೆಯನ್ನು ಮೂಗಿಗೆ ಮೂಗುತಿ ಧರಿಸುತ್ತಾರೆ. ವಧುವು ಮೂಗು ಚುಚ್ಚಿಸಿಕೊಳ್ಳದಿದ್ದಲ್ಲಿ ಮದುವೆಯಲ್ಲಿ ಆ ವಧುವನ್ನು ಧಾರೆ ಎರೆಯುವುದು ನಿಷಿದ್ಧ. ಆದ್ದರಿಂದ ಮದುವೆಯ ಸಂದರ್ಭದಲ್ಲಾದರೂ ವಧುವನ್ನು ಮೂಗು ಚುಚ್ಚಿಸಿ ಮೂಗುತಿ ಹಾಕಿಸಿ ಧಾರೆ ಎರೆಯುತ್ತಾರೆ. ಮುತ್ತೈದೆ ಭಾಗ್ಯವೆಂದೇ ಮೂಗುತ್ತಿಗೆ ಬಿರುದಾಂಕಿತ. ಕಿವಿಯ ಓಲೆಗೆ ಓಲೆ ಭಾಗ್ಯವೆನ್ನುವರು.

ಹೆಣ್ಣು ಮಕ್ಕಳಿಗೆ ಸಣ್ಣ ಪ್ರಾಯದಲ್ಲಿ ಬಳೆಯು ಅಲಂಕಾರವಾದರೆ ಮದುವೆಯಾದ ಹೆಣ್ಣಿಗೆ ಬಳೆಯು ಸೌಭಾಗ್ಯದ ಸೂಚನೆಯಾಗಿದೆ.

ಸೌಭಾಗ್ಯವತಿಯಾದ ಮನೆಯ ಗೃಹಿಣಿಯು ಅರುಣೋದಯಕ್ಕೆ ಮೊದಲು ಎದ್ದು ಪ್ರಾತಃ ವಿಧಿಗಳನ್ನು ಮುಗಿಸಿ ಮನೆಯನ್ನು ಸ್ವಚ್ಛ ಮಾಡಿ ದೇವರಿಗೆ ದೀಪ ಹಚ್ಚಿ ಪ್ರಾರ್ಥಿಸಿ, ಹಣೆಗೆ ಕುಂಕುಮವನ್ನಿಟ್ಟುಕೊಂಡು ತಾಳಿಗೂ ಕುಂಕುಮ್ಮವನ್ನಿಟ್ಟುಕೊಂಡು ನಂತರ ಮನೆ ಕೆಲಸವನ್ನು ಪ್ರಾರಂಭಿಸುವುದು ರೂಢಿಯಾಗಿದೆ.

ಯಾರು ಪರರಿಗಾಗಿ ಸ್ವಾರ್ಥಗಳನ್ನು ಬದಿಗಿರಿಸುವರೋ ಅವರು ಸತ್ಪುರುಷರು.

ತಮಗೆ ಹಾನಿಯಾಗದಂತೆ ಪರಿಹಿತಕ್ಕೂ ಶ್ರಮಿಸುವರೋ ಅವರು ಸಾಮಾನ್ಯರು.

ತಮ್ಮ ಹಿತಕ್ಕಾಗಿ ಹೆರವರ ಹಿತದ ಬಲಿತೆಗೆದುಕೊಳ್ಳುವರೋ ಅವರು ಮಾನವರೂಪೀ ರಾಕ್ಷಸರು.

ಆದರೆ ವ್ಯರ್ಥವಾಗಿ ಇತರರ ಹಿತಕೆಡಿಸುವವರನ್ನು ಏನೆಂದು ಕರೆಯಬೇಕೋ ತಿಳಿಯದು.

*–ಭರ್ತೃಹರಿ*

# ಕೊಡಗು ಗೌಡ ವಿದ್ಯಾಸಂಘ ನಡೆದು ಬಂದ ದಾರಿ

ಕೊಡಗು ಬಲು ಸೊಗಸು ಇದರ ರಮ್ಯ ವಾತಾವರಣ ಪ್ರಕೃತಿಯ ಅಮೂಲ್ಯವಾದ ಕೊಡುಗೆ. ಬೆಟ್ಟಗುಡ್ಡಗಳಿಂದ ನದಿ ಬಯಲುಗಳಿಂದ ಆವೃತವಾದ ಹಾಗೂ ಕಂಗೊಳಿಸುತ್ತಿರುವ ಕೊಡಗು. ಹಲವಾರು ಜನಾಂಗಗಳ ಆಶ್ರಯದಾತೆ. ಈ ಜನಾಂಗಗಳಲ್ಲಿ ಗೌಡ ಜನಾಂಗವು ಒಂದು.

ಗೌಡ ಜನಾಂಗದ ಗೌಡ ವಿದ್ಯಾಭಿವೃದ್ಧಿ ಸಂಘವು 1908ನೇ ಇಸವಿಯಲ್ಲಿ ದಿವಂಗತ ಕುಂಬುಗೌಡನ ಕುಶಾಲಪ್ಪನವರ ನೇತೃತ್ವದಲ್ಲಿ ಸ್ಥಾಪಿತವಾಯಿತು. ಇವರು ತಮ್ಮ ಸಹಪಾಠಿಗಳಾದ ಕೀರ್ತಿಶೇಷರುಗಳಾದ ತೆಕ್ಕಡ ಸುಬ್ಬಯ್ಯ, ಕೆದಂಬಾಡಿ ಸುಬ್ರಾಯ, ತೆಕ್ಕಡ ಕಾಳಪ್ಪ, ಕೋರನ ಮಾದಯ್ಯ, ಪೊಡನೋಳನ ಅಯ್ಯಪ್ಪ, ಮೂಟೇರ ಅಣ್ಣಯ್ಯ, ಕರ್ಣಯ್ಯನ ಅಪ್ಪಚ್ಚ ಇವರುಗಳ ಸಹಕಾರದೊಂದಿಗೆ ಸಂಘದ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿದರು. ಈ ಸಂಘವು ಇಂದಿಗೂ ಮಡಿಕೇರಿಯಲ್ಲಿ ನಡೆದು ಬರುತ್ತಿರುವುದು ತಮಗೆಲ್ಲರಿಗೂ ತಿಳಿದ ವಿಷಯವಾಗಿದೆ. 1908ರಲ್ಲಿ ಸ್ಥಾಪನೆಯಾಗಿ ಇಂದಿಗೆ ಬಹಳಷ್ಟು ಹಿಂದೆ ಈ ಸಂಘಕ್ಕಾಗಿ ದುಡಿದ ನಮ್ಮ ಪೂಜ್ಯರು 1933ರಲ್ಲಿ ಸಂಘಕ್ಕೆ ಬೇಕಾದ ಬೈಲಾವನ್ನು ಸರಕಾರದಲ್ಲಿ ರಿಜಿಸ್ಟ್ರರ್ ಮಾಡಿದರು. ತದನಂತರ ಜನಾಂಗದ ವಿದ್ಯಾರ್ಥಿಗಳ ವ್ಯಾಸಂಗಕ್ಕಾಗಿ ಮ್ಯಾನ್ಸ್ ಕಾಂಪೌಂಡ್ ಆಟದ ಮೈದಾನದ ಬಳಿ ಇರುವ ಒಂದು ಕಟ್ಟಡವನ್ನು (ಮೇಲಿನ ಕಟ್ಟಡ) ಪಡೆದು ಗೌಡ ವಿದ್ಯಾರ್ಥಿ ಭವನವಾಗಿ ಮಾಡಿದರು ಮತ್ತು ಅದರ ಕೆಳಭಾಗದಲ್ಲಿ 1 ಎಕ್ರೆ 20 ಸೆಂಟ್ ಜಾಗವನ್ನು ಸರಕಾರದಿಂದ ವಿದ್ಯಾಸಂಘಕ್ಕೆ ಮಂಜೂರು ಮಾಡಿಸಿ, ಅಲ್ಲಿಯೂ ಕೂಡ ಒಂದು ಕಟ್ಟಡವನ್ನು ಕಟ್ಟಿ ವಿದ್ಯಾರ್ಥಿನಿಯರ ಭವನ ಮಾಡಲಾಯಿತು. ಪ್ರಸ್ತುತ ಈ 1 ಎಕ್ರೆ 20 ಸೆಂಟು ಜಾಗದಲ್ಲಿ 30 ಸೆಂಟು ಜಾಗವನ್ನು ಗೌಡ ಸಮಾಜವನ್ನು ಕಟ್ಟಲು ಕೊಟ್ಟಿರುವರು. ಸಮಾಜದ ಕಟ್ಟಡವು ಕೂಡಾ ಎದ್ದು ನಿಂತಿದೆ. ಕೊಡಗಿನಲ್ಲಿ ಹೈಸ್ಕೂಲ್‌ಗಳ ಕೊರತೆಯಿದ್ದ ಆ ಸಮಯದಲ್ಲಿ ಹಳ್ಳಿಗಾಡಿನಲ್ಲಿ ವಾಸಿಸುತ್ತಿದ್ದ ಜನಾಂಗದ ಬಹುತೇಕ ಮಕ್ಕಳು ವಿದ್ಯೆಯನ್ನು ಪಡೆಯುವಂತಾಯಿತು.

**ಕೊಡಗು ಗೌಡ ವಿದ್ಯಾಸಂಘದ ವತಿಯಿಂದ ಮೈಸೂರಿನಲಿ ಕಟ್ಟಡ :**

ಮೈಸೂರಿನಲ್ಲಿ ವಾಸಿಸುತ್ತಿರುವ ಗೌಡ ಜನತೆಯು 'ಕೊಡಗು ಗೌಡ ವಿದ್ಯಾಸಂಘ ಮೈಸೂರು' ಎಂಬ ಸಂಸ್ಥೆಯನ್ನು 10.2.1960ರಲ್ಲಿ ಸ್ಥಾಪಿಸಿ ಕಟ್ಟಡಕ್ಕೆ ಬೇಕಾದ 100x200 ಅಡಿ ಜಾಗವನ್ನು ಮೈಸೂರಿನ ಜಯಲಕ್ಷ್ಮಿ ಬಡಾವಣೆಯಲ್ಲಿ ಖರೀದಿಸಿದರು. 1979ರಲ್ಲಿ ತಮ್ಮ ಈಗಿನ ಪೂಜ್ಯರುಗಳ ಶ್ರಮದಾನ ಫಲವಾಗಿ ಇಂದಿನ ಮುಂದುವರಿದ ವ್ಯಾಸಂಗಕ್ಕಾಗಿ ರೂ. 3 ಲಕ್ಷ ಖರ್ಚಿನಿಂದ ನೂತನ ಮಾದರಿಯ 2 ಕಟ್ಟಡವನ್ನು ಕಟ್ಟಿಸಿರುವರು. ಈ ಎರಡು ಕಟ್ಟಡಗಳಲ್ಲಿ ಒಂದನ್ನು 14 ಕೊಠಡಿಯ ವಿದ್ಯಾರ್ಥಿ ಭವನವನ್ನು ಮತ್ತೊಂದನ್ನು ಊಟದ ಹಾಲ್ ಆಗಿ ಕಟ್ಟಿಸಿದರು.

**ಕೊಡಗು ಗೌಡ ಸಂಘದಿಂದ ವಿದ್ಯಾರ್ಥಿ ವೇತನ :**

ಮೊದಲು ಈ ಸಂಘದಿಂದ ವಿದ್ಯಾಭ್ಯಾಸಕ್ಕಾಗಿ ಬಡ ವಿದ್ಯಾರ್ಥಿಗಳಿಗೆ ಸಾಲ ರೂಪದಲ್ಲಿ ಧನಸಹಾಯ ಮಾಡುತ್ತಿದ್ದರು. ಈಗ ಅದನ್ನು ನಿಲ್ಲಿಸಿ ಪರೀಕ್ಷೆಗಳಲ್ಲಿ ಹೆಚ್ಚು ಅಂಕ ಪಡೆದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ 'ವಿದ್ಯಾರ್ಥಿ ವೇತನ'ವನ್ನು ಪ್ರತಿ ವರ್ಷವೂ ಹಂಚುತ್ತಿದ್ದಾರೆ. ಇದಕ್ಕಾಗಿ ಜನರಿಂದ ಗೌಡ ವಿದ್ಯಾಸಂಘದವರು ಶಾಶ್ವತ ಸ್ಮಾರಕ ನಿಧಿಯನ್ನು ಸ್ಥಾಪಿಸಿದ್ದಾರೆ. ಇಂತಹ ಶಾಶ್ವತ ಸ್ಮಾರಕ ನಿಧಿಗಳ ಹಣವು ಸುಮಾರು 9,60,000/-ಕ್ಕೆ ಏರಿದೆ. ಇದರಿಂದ ಬರುವ ಪ್ರತಿ ವರ್ಷದ ಬಡ್ಡಿಯ ಹಣವನ್ನು ಎಸ್.ಎಸ್.ಎಲ್.ಸಿ., ಪಿ.ಯು.ಸಿ., ಬಿ.ಎ., ಬಿ.ಕಾಂ., ಬಿ.ಎಸ್ಸಿ.,ಯಲ್ಲಿ ಹೆಚ್ಚಿನ ಅಂಕ ಪಡೆದವರಿಗೆ ಅವರ ಮುಂದಿನ ವ್ಯಾಸಂಗಕ್ಕಾಗಿ ವಿದ್ಯಾರ್ಥಿ ವೇತನವಾಗಿ ಕೊಡುತ್ತಿದ್ದಾರೆ.

**ಕೊಡಗು ಗೌಡ ವಿದ್ಯಾಸಂಘದಿಂದ ಸದಸ್ಯರನ್ನಾಗಿ ಮಾಡುವ ಕಾರ್ಯಕ್ರಮ:**

ವಿದ್ಯಾಸಂಘದಲ್ಲಿ ಹೆಚ್ಚಿನ ಮುಂದುವರಿಕೆಗೆ ಬಂಡವಾಳದ ಕೊರತೆಯುಂಟಾಗಿದೆ. ಈಗಿನ ಆಡಳಿತ ಮಂಡಳಿಯವರು ಹಿಂದಿನಂತೆ ಜನಾಂಗದ ಹಿತೈಷಿಗಳಿಂದ ಚಂದಾ ಹಣವನ್ನು ಕೇಳುವ ಬದಲು ಜನಾಂಗದ ಎಲ್ಲಾ 18 ವರ್ಷಕ್ಕೆ ಮೇಲ್ಪಟ್ಟ ಹಿತೈಷಿಗಳನ್ನು ಸಂಘಕ್ಕೆ ಸದಸ್ಯರನ್ನಾಗಿ ಮಾಡುವ ಕಾರ್ಯಕ್ರಮವನ್ನು ಮಾಡಿದ್ದಾರೆ. 1981ರಲ್ಲಿ

ಗೌಡ ವಿದ್ಯಾಸಂಘದ ಸದಸ್ಯರ ಸಂಖ್ಯೆ 300 ಆಗಿತ್ತು. ಈಗ ನಮ್ಮ ಯುವಕ ನಿರ್ದೇಶಕರ ಪ್ರಯತ್ನದಿಂದ ಸಂಘದ ಸದಸ್ಯರ ಸಂಖ್ಯೆ 1500ಕ್ಕೆ ಏರಿದೆ.

**ಗೌಡ ವಿದ್ಯಾಸಂಘದಿಂದ ಸ್ಮಶಾನ :**

ಮಡಿಕೇರಿಯ ಗೌಡ ವಿದ್ಯಾಸಂಘವು ಸರ್ಕಾರದಿಂದ ಅರ್ಧ ಎಕ್ರೆ ಜಾಗವನ್ನು ಮಂಜೂರು ಮಾಡಿಸಿ ಈ ಸ್ಮಶಾನವನ್ನು ಗೌಡ ಜನಾಂಗದವರು ಮೃತಪಟ್ಟಾಗ ಶವ ಸಂಸ್ಕಾರ ಮಾಡಲು ಅನುಕೂಲತೆಗಳನ್ನೊದಗಿಸಿದ್ದಾರೆ.

**ಗೌಡ ವಿದ್ಯಾಸಂಘದಲ್ಲಿ ವಿವಾಹದ ಅನುಕೂಲತೆಗಳು:**

ಮ್ಯಾನ್ಸ್ ಕಾಂಪೌಂಡ್ ಬಳಿ ಇರುವ ಗೌಡ ವಿದ್ಯಾರ್ಥಿ ನಿಲಯದಲ್ಲಿ ಗೌಡ ಜನಾಂಗದವರಿಗೂ ಮತ್ತು ಇತರ ಜನಾಂಗದ ಜನರಿಗೂ ವಿವಾಹವನ್ನು ನಡೆಸಲು ಸಕಲ ಅನುಕೂಲತೆಗಳನ್ನು ಒದಗಿಸಿ ಕೊಡಲಾಗುತ್ತಿದೆ.

ಹಿಂದಿನ ಧುರೀಣರನ್ನು, ಪೂಜ್ಯರನ್ನು ಸ್ಮರಿಸುತ್ತಾ, ಹಾಲಿ ಸಂಘದ ಪ್ರತಿಯೊಬ್ಬ ಕಾರ್ಯಕರ್ತರಿಗೂ ಸಂಘದ ಏಳಿಗೆಗಾಗಿ ಸತತ ದುಡಿಯುವಂತೆ ಭಗವಂತ ಅನುಗ್ರಹಿಸಲೆಂದು ಹಾರೈಸೋಣ ಮತ್ತು ಇದೇ ರೀತಿ ನಮ್ಮ ಸಂಘ ಸಂಸ್ಥೆಯ ಏಳಿಗೆಯು ತುತ್ತ ತುದಿಯಲ್ಲಿ ನಿಂತು ಬೆಳಗಲಿ ಎಂದು ದೇವರಲ್ಲಿ ಪ್ರಾರ್ಥಿಸೋಣ.

************************

# ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರು

| | | |
|---|---|---|
| 1. | ದಿ॥ ಕುಂಬುಗೌಡನ ಕುಶಾಲಪ್ಪ | 1908–1918 |
| 2. | ದಿ॥ ತೆಕ್ಕಡೆ ಸುಬ್ಬಯ್ಯ | 1918–1922 |
| 3. | ದಿ॥ ಮೂಟೇರ ಅಣ್ಣಯ್ಯ | 1922–1924 |
| 4. | ದಿ॥ ಶಿರಕಜೆ ಪೊನ್ನಪ್ಪ | 1924–1925 |
| 5. | ದಿ॥ ಚೆರಿಯಮನೆ ಕುಶಾಲಪ್ಪ | 1925–1927 |
| 6. | ದಿ॥ ನಿಡ್ಯಮಲೆ ಮುದ್ದಪ್ಪ, ಬಿ.ಎ., ಬಿ.ಎಲ್., | 1927–1928 |
| | | 1940–1949 |
| 7. | ದಿ॥ ತೆಕ್ಕಡೆ ಆನಂದಯ್ಯ | 1928–1932 |
| | | 1937–1939 |
| 8. | ದಿ॥ ಬಡ್ಡನ ಮುತ್ತಣ್ಣ | 1932–1934 |
| 9. | ದಿ॥ ಉಳುವಾರನ ಅಪ್ಪಯ್ಯ | 1934–1936 |
| 10. | ದಿ॥ ನಿಡ್ಯಮಲೆ ಸೋಮಣ್ಣ, ಬಿ.ಎ., ಬಿ.ಎಲ್., | 1936–1937 |
| 11. | ದಿ॥ ಕೋರನ ದೇವಯ್ಯ, ಮಾಜಿ ಶಾಸಕರು | 1949–1956 |
| 12 | ದಿ॥ ತೋಟಂಬೈಲು ಮಾದಪ್ಪ | 1956–1958 |
| 13. | ದಿ॥ ಚೆರಿಯಮನೆ ಪೊನ್ನಪ್ಪ | 1958–1961 |
| | | 1971–1974 |
| 14. | ದಿ॥ ದಂಬೆಕೋಡಿ ಎ. ಚಿಣ್ಣಪ್ಪ, ಬಿ.ಕಾಂ., ಬಿ.ಎಲ್., | 1961–1964 |
| | | 1968–1971 |
| 15. | ದಿ॥ ತೋಟಂಬೈಲು ಕೆ. ಚಂಗಪ್ಪ, ಬಿ.ಕಾಂ., ಬಿ.ಎಲ್., | 1964–1968 |
| 16. | ದಿ॥ ಪಾಂಡನ ಡಿ. ಸುಬ್ಬಯ್ಯ, ಮಾಜಿ ಶಾಸಕರು | 1974–1981 |
| 17. | ದಿ॥ ಕುದುಪಜೆ ಬಿ. ಕೃಷ್ಣಪ್ಪ ಬಿ.ಎ., ಬಿ.ಎಲ್., | 1981–1994 |
| 18. | ಕೆ.ಕೆ. ಪೂರ್ಣಯ್ಯ | 1994–2000 |
| 19. | ಹೊಸೂರು ರಮೇಶ್ ಜೋಯಪ್ಪ | 2000–ರಿಂದ |

# ಗೌಡ ಜನಾಂಗದ 18 ಗೋತ್ರಗಳು

1. ಕಬರ್ ಗೋತ್ರ
2. ನಂದರ ಗೋತ್ರ
3. ಹೆಮನ ಗೋತ್ರ
4. ಬಂಗಾರ ಗೋತ್ರ
5. ಶೆಟ್ಟಿ ಗೋತ್ರ (ಹಾಲುಗುಂಡರ)
6. ಮೌಲ್ಯರ ಗೋತ್ರ (ಮೂಲಾರ್)
7. ಗೌಡ ಗೋತ್ರ
8. ಸಾಲೆ ಗೋತ್ರ
9. ಗೋಳಿ ಗೋತ್ರ
10. ನಾಯರ್ ಗೋತ್ರ
11. ಬಳಸನ್ನ ಗೋತ್ರ
12. ಕರ್ಬಣ್ಣ ಗೋತ್ರ
13. ಓದನ್ನ ಗೋತ್ರ
14. ಚಾಲ್ಯರ ಗೋತ್ರ
15. ಕರ್ಂಬೆರ್ ಗೋತ್ರ
16. ಚಿತ್ತೆರ ಗೋತ್ರ
17. ಗುಂಡರ ಗೋತ್ರ
18. ಲಿಂಗಾಯಿತ ಗೋತ್ರ

# ವೀಳ್ಯಶಾಸ್ತ್ರದ ವೀಳ್ಯಗಳು

ಕೊಡಗಿನಲ್ಲಿ

1. ಮಾತಿನ ಕರಾರು ವೀಳ್ಯ
2. ವೀಳ್ಯಶಾಸ್ತ್ರದ ವೀಳ್ಯ
3. ಮದುವೆ ಕುರಿ ವೀಳ್ಯ
4. ಬಣ್ಣ ಬಂಗಾರ ವೀಳ್ಯ
5. ತಂದೆ ಗೋತ್ರ ವೀಳ್ಯ
6. ತಾಯಿ ಗೋತ್ರ ವೀಳ್ಯ
7. ಮಹಾನಾಡು ವೀಳ್ಯ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ

1. ಹೆಣ್ಣು ಮಾತಿನ ವೀಳ್ಯ
2. ಸಾಲಾವಳಿ ವೀಳ್ಯ
3. ಹೆಣ್ಣು ಮಾತಿನ ಕರಾರು ವೀಳ್ಯ
4. ಲಗ್ನದ ಕುರಿ ವೀಳ್ಯ
5. ದೇವರ ವೀಳ್ಯ
6. ಗುರು ವೀಳ್ಯ
7. ಭಾಂದವರ ವೀಳ್ಯ
8. ತಂದೆ ವೀಳ್ಯ
9. ತಾಯಿ ವೀಳ್ಯ
10. ಅಚ್ಚು ಕಟ್ಟುವ ವೀಳ್ಯ
11. ಬಣ್ಣ ಬಂಗಾರ ವೀಳ್ಯ
12. ತೆರವು ಮರವು ವೀಳ್ಯ
13. ದೇಶ ಮಹಾನಾಡು ವೀಳ್ಯ

## ತೆರ

1. ರೂ. 4.50 ಹುಡುಗಿಯ ಮುತ್ತೈದೆತನಕ್ಕೆ ಕಟ್ಟುವ ಹಣ.
2. 0.50 ಎಲೆ ಅಡಿಕೆ ಖರ್ಚು
3. 0.50 ಸ್ಥಳ ಮರ್ಯಾದೆ
4. 0–25 ಗೌಡ ಆರತಿ
5. 0.25 ತಾಯಿ ಆರತಿ
6. 0.25 ಬೀಡು ಆರತಿ

ರೂ. 6.25 ಪೈಸೆ

| | |
|---|---|
| 1. ಶೃಂಗೇರಿ ಮಠಕ್ಕೆ ಹುಡುಗಿಯ ಮುತ್ತೈದೆತನಕ್ಕೆ | 6.25 |
| 2. ಎಲೆ ಅಡಿಕೆ ಖರ್ಚು | 0.50 |
| 3. ಹಾಲೆ ಮರ ಪಾದ ಕಂಬಕ್ಕೆ | 1.25 |
| 4. ಆರತಿಗಳಿಗೆ | 1.25 |
| 5. ಸ್ಥಳ ಮರ್ಯಾದೆ | 1.25 |
| | ರೂ. 10.50 |

## ಸಾರ್ಥಕ ಮನೆಯ ಲಕ್ಷಣಗಳು

1. ವ್ಯವಸ್ಥೆಯೇ ಮನೆಯ ಸೊಬಗು !
2. ಸಮಾಧಾನವೇ ಮನೆಯ ಸುಖ !
3. ಆದಾರಾತಿಥ್ಯವೇ ಮನೆಯ ವೈಭವ !
4. ಧಾರ್ಮಿಕತೆಯೇ ಮನೆಯ ಕಲಶ !
5. ಸಂತುಷ್ಟ ಗೃಹಿಣಿಯೇ ಮನೆಯ ಲಕ್ಷ್ಮಿ !

ಭಾಗ – 2

# ಗೌಡರ ಪದ್ಧತಿ

**ಹೆರಿಗೆ :**

ಒಂದು ಕುಟುಂಬದಲ್ಲಿ ಒಬ್ಬಳು ಸ್ತ್ರೀಯು ಪ್ರಸವಿಸಿದರೆ ಆ ಕುಟುಂಬಕ್ಕೆ 16 ದಿನ ಸೂತಕವಿರುತ್ತದೆ. ಈ ಸೂತಕದ ದಿನಗಳಲ್ಲಿ ಆ ಕುಟುಂಬಸ್ಥರು ದೇವಸ್ಥಾನ ಹಾಗೂ ಯಾವ ಪವಿತ್ರ ಸ್ಥಳಗಳಿಗೆ ಹೋಗಬಾರದು. ಪೂರ್ವಿಕರ ಪದ್ಧತಿಯಂತೆ ಚೊಚ್ಚಲು ಬಾಣಂತನ ಅಂದರೆ ಮೊದಲ ಹೆರಿಗೆ ಹೆಣ್ಣಿನ ತವರು ಮನೆಯಲ್ಲಿಯೇ ಮಾಡುವ ಪದ್ಧತಿ ಇದೆ. ಹೆರಿಗೆಯಾದ ಏಳನೇ ದಿನ ಗ್ರಾಮದ ಮಡಿವಾಳಗಿತ್ತಿ ಬಂದು ತಾಯಿ ಮತ್ತು ಮಗುವನ್ನು ಸ್ನಾನ ಮಾಡಿಸಿ 'ಅಮೆ' ಎಂಬ ಶುದ್ಧಿಕ್ರಿಯೆಯನ್ನು ಮಾಡುತ್ತಾಳೆ. ಅಂದು ದೇವಸ್ಥಾನದಿಂದ ಪುಣ್ಯಾರ್ಚನೆಯನ್ನು ತಂದು ಮಾವಿನ ಎಲೆಗಳಿಂದ ಮುಡಿಪಿಗೂ, ಮನೆ ಮತ್ತು ಮನೆಯವರೆಲ್ಲರಿಗೂ ಚಿಮುಕಿಸುತ್ತಾರೆ.

ಮಡಿವಾಳಗಿತ್ತಿಗೆ ಅಕ್ಕಿ, ತೆಂಗಿನಕಾಯಿ ಮತ್ತು ಹಣ ಕೊಡುವ ಕ್ರಮವಿದೆ.

**ಮಗುವನ್ನು ತೊಟ್ಟಿಲಲ್ಲಿ ಇಡುವ ಕ್ರಮ :**

ಪ್ರಸವಿಸಿದ ಹದಿನೈದು ದಿನಗಳವರೆಗೆ ಮಗುವನ್ನು ತೊಟ್ಟಿಲಲ್ಲಿ ಮಲಗಿಸುವ ಕ್ರಮ ಇಲ್ಲ. ಹದಿನಾರನೆಯ ದಿನ ಮಗುವಿಗೆ ಅನ್ನ ಕೊಡವ ಶಾಸ್ತ್ರ ಮಾಡಿ ಮಗುವಿಗೆ ಹೆಸರು ಹಾಕಿ ತೊಟ್ಟಿಲಿಗೆ ಹಾಕುವರು. ಮಗುವಿನ ನಾಮಕರಣದ ದಿನ ತಾಯಿ ಮತ್ತು ಮಗುವನ್ನು ಸ್ನಾನ ಮಾಡಿಸುವರು. ಅನಂತರ ಮನೆಯ ಯಜಮಾನಿತಿ, ಅಜ್ಜಿ ಯಾ ಹಿರಿಯರು ಮಗುವನ್ನು ಮಡಿಲಲ್ಲಿ ಮಲಗಿಸಿಕೊಂಡು ಹೊಸ ಬಟ್ಟೆಗಳನ್ನು ಹಾಕಿ ನೆಲ್ಲಕ್ಕಿಯಡಿಯಲ್ಲಿ ಕುಳಿತುಕೊಳ್ಳುತ್ತಾರೆ.

ಆ ಮೇಲೆ ಅನ್ನ ಕೊಡುವ ಕ್ರಮ. ಅನ್ನವನ್ನು ಮೊಸರಿನೊಂದಿಗೆ ನುಣ್ಣಗೆ ಅರೆದು ಒಂದು ಮಣ್ಣಿನ ಚಟ್ಟೆಯಲ್ಲಿ ಇಟ್ಟುಕೊಂಡಿರುತ್ತಾರೆ.

ಮೊದಲು ಅಜ್ಜಿ ಮಗುವಿನ ಬಾಯಿಗೆ ಅನ್ನ ಹಾಕಿ 'ಹುಗ್ಗೆ ಉಂಡ್, ಹುಗ್ಗೆ ಬೇರುಂಡ್ ನೂರು ವರ್ಷ ಆರೋಗ್ಯಯವಂತನಾ(ಳಾ)ಗಿ ಬಾಳ್' ಮಗುವೆ ಎಂದು ತೃಪ್ತಿಯಿಂದಲೂ ತುಂಬು ಹರ್ಷದಿಂದಲೂ ಹರಸುತ್ತಾರೆ. ಆ ಮೇಲೆ ಅಲ್ಲಿ

ನೆರೆದವರೆಲ್ಲರೂ ಅನ್ನ ಕೊಡುವ ಶಾಸ್ತ್ರ ಮಾಡಿ ಹರಸುತ್ತಾರೆ. ಆ ನಂತರ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಹೆಸರಿಡುವ ಕ್ರಮ. ನಾಮಕರಣದ ದಿನಕ್ಕೆ ನೆರೆ ಹೊರೆಯವರನ್ನು, ಬಂಧುಮಿತ್ರರನ್ನು, ಊರಿನವರನ್ನು ಆಮಂತ್ರಿಸಿಕೊಳ್ಳುವರು. ಅಂದು ಮಗುವನ್ನು ಸ್ನಾನ ಮಾಡಿಸಿ ಧೂಪ ದೀಪಗಳಿಂದ ತೊಟ್ಟಿಲನ್ನು ಶುದ್ಧ ಮಾಡಿ ನೆಲ್ಲಕ್ಕಿ ಅಡಿಯಲ್ಲಿ ಇರಿಸುವರು. ಮಗುವಿಗೆ ಪಂಚಾಂಗದಲ್ಲಿ ಬಂದ ನಾಮ ನಕ್ಷತ್ರದ ಹೆಸರನ್ನು ನಿಶ್ಚಯಿಸಿಕೊಂಡ ನಂತರ ಮಗುವನ್ನು ಪೂರ್ವಕ್ಕೆ ತಲೆ ಮಾಡಿ ತೊಟ್ಟಿಲಲ್ಲಿ ಮಲಗಿಸಿ ಹೆಸರಿಡುವರು. ನೆರೆದ ವನಿತೆಯರೆಲ್ಲರೂ ಜೋಗುಳವನ್ನು ಹಾಡಿಕೊಂಡು ತೊಟ್ಟಿಲನ್ನು ತೂಗುವರು.

ಈ ಕಾರ್ಯಕ್ರಮವನ್ನು ಅವರವರ ಶಕ್ತ್ಯಾನುಸಾರ ವಿಜೃಂಭಣೆಯಿಂದ ನಡೆಸುತ್ತಾರೆ. ಸೇರಿದವರೆಲ್ಲರೂ ಮಗುವಿಗೆ ಉಡುಗೊರೆಯನ್ನು ನೀಡಿ ಆಶೀರ್ವದಿಸುವರು. ಅನಂತರ ನೆರೆದವರೆಲ್ಲರಿಗೂ ಭೋಜನವನ್ನು ನೀಡುತ್ತಾರೆ.

ತದನಂತರ 40 ದಿವಸ ಕಳೆದ ಬಳಿಕ ಬಾಣಂತಿಯನ್ನು ಶುಭ ಸ್ನಾನ ಮಾಡಿಸಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗುವ ಪದ್ಧತಿ ಇದೆ. ಆ ದಿನ ಸ್ನಾನ ಮಾಡಿ ಗಂಗೆ ಪೂಜೆಯನ್ನು ಮಾಡಿ ಅಲ್ಲಿಂದ ಬರುವಾಗ ಮುತ್ತೈದೆಯರು ತಂಬಿಗೆಯಲ್ಲಿ ನೀರು ತಂದು ನೆಲ್ಲಕ್ಕಿಯಡಿಯಲ್ಲಿ ಇಡುತ್ತಾರೆ. ಅನಂತರ ಮಗುವಿನ ತಾಯಿ ಕುಲದೇವರಿಗೆ ವಂದಿಸಿ ಹಿರಿಯ ಕಾಲು ಮುಟ್ಟಿ ಆಶೀರ್ವಾದ ಪಡೆಯುವುದು ಪದ್ಧತಿಯಲ್ಲಿದೆ.

ಆ ಮೇಲೆ ಶುಭ ದಿನವನ್ನು ಗೊತ್ತು ಮಾಡಿಕೊಂಡು ಪತಿಯ ಮನೆಯವರು ಹೆಣ್ಣಿನ ತವರು ಮನೆಗೆ 5/7 ಸ್ತ್ರೀಯರು ಹೋಗಿ ಮಗುವನ್ನು ತಾಯಿಯನ್ನು ತೊಟ್ಟಿಲು ಸಮೇತ ಕರೆದುಕೊಂಡು ಬರುವರು.

ತೊಟ್ಟಿಲ ಮಗುವನ್ನು ಮನೆಗೆ ಕರೆ ತಂದಾಗ ಮೊದಲು ಅಂಗಳದಲ್ಲಿ ನಿಲ್ಲಿಸಿ ದೇವರಿಗೆ ದೀಪವನ್ನು ಹಚ್ಚಿಟ್ಟು ಆ ಮೇಲೆ ಅರಸಿನ ನೀರಿನಿಂದ ತಾಯಿಗೂ ಮಗುವಿಗೂ ದೃಷ್ಟಿ ತೆಗೆದು ಆ ನೀರನ್ನು ಕಾಲಿನ ಬುಡದಲ್ಲಿ ಹುಯ್ಯುತ್ತಾರೆ. ಆ ನಂತರ ಮನೆಯ ಯಜಮಾನ ಯಾ ಯಾಜಮಾನಿತಿಯು ಮಗುವನ್ನು ಎತ್ತಿಕೊಂಡು ಮನೆ ಹತ್ತಿಸಿಕೊಳ್ಳುತ್ತಾರೆ. ಮೊದಲಿಗೆ ತೊಟ್ಟಿಲನ್ನು ನೆಲಕ್ಕಿಯಡಿಯಲ್ಲಿಟ್ಟು ಮಗುವನ್ನು ಅದರಲ್ಲಿ ಮಲಗಿಸುತ್ತಾರೆ. ತದನಂತರ ಮಗುವಿನ ತಾಯಿ ಕೈ ಕಾಲು ತೊಳೆದು ದೇವರಿಗೆ ವಂದಿಸಿ ಹಿರಿಯ ಮತ್ತು ಪತಿಯ ಪಾದ ಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾಳೆ.

## ಮಗುವನ್ನು ತೊಟ್ಟಲಿಗೆ ಹಾಕುವಾಗ ಹೇಳುವ ಹಾಡು

ಪಾಲ್ಗಡಲ ಮೇಲ ಪನ್ನಾಗಶಯನ ।
ಅಲದೆಲೆಯ ಮೇಲೆ ಲೋಲಾಡು ಶಿಶುವೆ ॥ ಜೋ ಜೋ ॥
ಚಿನ್ನಾಲಿತಂಗಿ, ಚಿತ್ತಾಲಿತಂಗಿ, ಚಿತ್ತಾವರಿಗುಂಡು ಬಾರಿಬಾರಿಗೂ
ತೂಗುವೆನಯ್ಯ ಜೋ ಜೋ ॥

ಜೋ, ಜೋ, ಜೋ, ಮುದ್ದು ನೀಲದ ವರ್ಣ
ಜೋ ತೂಷಿ ರೂಪಾ । ಜೋ ಜೋ.
ಒಂದು ತಿಂಗಳಿಗೆ ಏನೆಲ್ಲಾ ಬಯಸಿದೆ ಗೋಪಿ ॥ ಜೋ ಜೋ ॥
ಒಂದು ತಿಂಗಳಿಗೆ ರಸಬಾಳೆ ಹಣ್ಣಿಗೆ ಬಯಸಿದೆ ಗೋಪಮ್ಮ ಜೋ ಜೋ
ಜೋ ಜೋ ಜೋ ಮುದ್ದು ನೀಲದುರಿಣ ಜೋತೋಸಿ ರೂಪಾ ಜೋ ಜೋ
ಒಂದಳಾ ಬಿಟ್ಟು ತರುಸ್ಯಾನರಾಯರ ಜೋ ಜೋ

ಎರಡು ತಿಂಗಳಿಗೆ ಏನೆಲ್ಲಾ ಬಯಸಿದೆ ಗೋಪಿ ಜೋ ಜೋ
ಎರಡು ತಿಂಗಳಿಗೆ ಮಾವಿನ ಹಣ್ಣಿಗೆ ಬಯಸಿದೆ ಗೋಪಿ ಜೋ ಜೋ
ಎರಡಾಳ ಬಿಟ್ಟು ತರುಸ್ಯಾನರಾಯ ಜೋ ಜೋ ಜೋ
ಜೋ ಮುದ್ದು ನೀಲ ವರ್ಣ, ಜೋ ತೂಷಿ ರೂಪಾ ಜೋ ಜೋ ಜೋ

ಮೂರು ತಿಂಗಳಿಗೆ ಏನೆಲ್ಲ ಬಯಸಿದೆ ಗೋಪಿ ಜೋ ಜೋ
ಮೂರೂ ತಿಂಗಳಿಗೆ ಕಿತ್ತಾಳೆ ಹಣ್ಣಿಗೆ ಬಯಸಿದೆ ಗೋಪಿ ಜೋ ಜೋ
ಮೂರಾಳ ಬಿಟ್ಟು ತರುಸ್ಯಾನರಾಯ ಜೋ ಜೋ ಜೋ
ಜೋ ಮುದ್ದು ನೀಲವರ್ಣ, ಜೋ ತೂಷಿ ರೂಪ ಜೋ ಜೋ

ಬಾಣಂತಿ ತಂದು ಬಾಗ್ಲಲ್ಲಿ ನಿಲ್ಲಿಸಿ, ಸೂರತ್ತಿ ತಂದು ನಿಲಿಸಿ
ಬಾಲನಪ್ಪನ ಬಾಯ್ಮೇಲೆ ಹೊಯ್ಯಿ ಜೋ ಜೋ
ಜೋ ಮುದ್ದು ನೀಲವರ್ಣ ಜೋ ಜೋ ಜೋ ತೂಷಿ ರೂಪಾ ಜೋ ಜೋ
ಕನಕ ನಿರ್ಮಿತವಾದ ತೊಟ್ಟಿಲ ತರಿಸಿ, ಜನ ಕುಮಾರನ
ತೊಟ್ಟಿಲೊಳಿರಿಸಿ, ಮುನಿಪತ್ನಿಯರೆಲ್ಲರೂ ತಾವು ಸಿಂಗರಿಸಿ ಜೋ ಜೋ
ಜೋ ಮುದ್ದು, ಜೋ ನೀಲವರ್ಣ, ಜೋ ತೂಷಿ ರೂಪಾ ಜೋ ಜೋ

ಜೋ ಜೋ ಸೀತಾದೇವಿಯ ಕಂದ ಜೋ ಜೋ
ಜೋ ಶ್ರೀರಾಮಪುತ್ರ ರಾಕ್ಷಸ ಕುಲವೈರಿ ಕಂದ ಜೋ ಜೋ ಜೋ
ಜೋ ಜೋ ಭೂಮಿಗೆ ಪತಿಯಾಗಿನಿಂದ ಜೋ ಜೋ
ಜೋ ಮುದ್ದು ಜೋ ನೀಲವರ್ಣ ಜೋ ತೂಷಿ ರೂಪ ಜೋ ಜೋ ಜೋ

## ಹಾಡು ನಂ. 2

ಜೋ ಜೋ ಶ್ರೀ ಕೃಷ್ಣ ಪರಮಾನಂದ
ನಂದ ಗೋಪಿಯ ಕಂದ, ನಂದ ಮುಕುಂದ ಜೋ ಜೋ
ಪಾಲುಗಡಲೊಳು ಪವಡಿಸಿದವನೇ
ಅಲದೆಲೆಯ ಮೇಲೆ ಮಲಗಿದ ಶಿಶುವೇ ಜೋ ಜೋ ॥ ಶ್ರೀ ಕೃಷ್ಣ ॥

ತಳ ತಳಿಸುವ ಗುರುಗುಂಜಿಯ ಮೇಲೆ
ಮಲಗಿರುವ ಶಿಶುವೇ ಶ್ರೀಲಲಿತಗೆ, ವಿಚಿತ್ರ ವಲ್ಲಭನೆ,
ಬಾಲ ನಿನ್ನನು ಪಾಡಿ ತೂಗುವೆನಯ ಜೋ ಜೋ ॥ ಶ್ರೀ ಕೃಷ್ಣ ॥

ಯಾರ ಕಂದವೇ, ಇನ್ನಾರ ದಾನಿಯೆ,
ಇನ್ನಾರ ರತ್ನವೇ, ಇನ್ನಾರ ಮಾಣಿಕವೇ
ಸೇರಿತು ನಿನಗೊಂದು ಚಿಂತಾಮಣಿ
ಎನುತ ಬಾಲ ನಿನ್ನನ್ನು ಪಾಡಿ ತೂಗುವೆನಯ ಜೋ ಜೋ ॥ ಶ್ರೀ ಕೃಷ್ಣ ॥

ಗುಣನಿದಾನಿಯೆ ನಿನ್ನಾ ಎತ್ತಿಕೊಂಡಿಪೆನಯ್ಯ,
ಮನೆ ಕೆಲಸವಿನ್ನಾರು ಮಾಡುವರಯ್ಯ
ಮನಕೆ ಸುಖ ನಿದ್ರೆ ತಂದುಕೋ ಬೇಗ ಪದಣೆಶಯನೆ ಜೋ ಜೋ ॥ ಶ್ರೀ ಕೃಷ್ಣ ॥
ಅಂಡಜವಾಹನ ಅನಂತಮಯನ
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನೇ
ಜೋ ಜೋ............ ಜೋ ಜೋ

'ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ'
ಜನ್ಮ ನೀಡಿದ ತಾಯಿಯು ಜನ್ಮ ಭೂಮಿಯು ಸ್ವರ್ಗಕ್ಕಿಂತಲೂ ಶ್ರೇಷ್ಠ)
*– ರಾಮಾಯಣ*

**ಋತುಶಾಂತಿ :**

ಹೆಣ್ಣು ಮಕ್ಕಳು ಸಾಧಾರಣವಾಗಿ ಹದಿಮೂರರಿಂದ ಹದಿನೆಂಟು (13–18) ವರ್ಷಗಳೊಳಗೆ ರಜಸ್ವಲೆಯಾಗುವರು. ಪ್ರಥಮ ರಜಸ್ವಲೆಯಾದ ಹೆಣ್ಣು ಮಗಳು ಆ ದಿನ ಯಾವುದಾದರೊಂದು ಫಲದ ಮರದ ಅಡಿಯಲ್ಲಿ ಹೋಗಿ ಕುಳಿತುಕೊಳ್ಳುವುದು ವಾಡಿಕೆ.

ರಜಸ್ವಲೆಯಾಗಿರುವಳೆಂದು ತಿಳಿದ ಹೆಣ್ಣು ಮಗುವನ್ನು ಮನೆ ಅಂಗಳಕ್ಕೆ ಕರೆ ತಂದು ಮನೆಯ, ನೆರೆಯ ಹೆಂಗಸು ಮುತ್ತೈದೆಯರು ಋತುವಾದ ಹುಡುಗಿಯನ್ನು ಪೂರ್ವಾಭಿಮುಖವಾಗಿ ಒಂದು ಮಣೆಯಲ್ಲಿ ಕುಳ್ಳಿರಿಸುತ್ತಾರೆ. ನಂತರ ಐದು ಚೆಂಬುಗಳಲ್ಲಿ ನೀರು, ಮಾವಿನ ಎಲೆ ಮತ್ತು ಎಣ್ಣೆ ಚರಕಿನಲ್ಲಿ ಎಣ್ಣೆ, ಗರಿಕೆಹುಲ್ಲು ಇಡಬೇಕು. ನಂತರ ಮುತ್ತೈದೆಯರು, ಅತ್ತಿಗೆ ನಾದಿನಿಯರು ಎಣ್ಣೆ ಚರಕಿನಿಂದ ಎಣ್ಣೆಯನ್ನು ಗರಿಕೆಯಿಂದ ತೆಗೆದುಕೊಂಡು ತಲೆಗೂ ಕಾಲಿಗೂ ಹಚ್ಚಿ ಶಾಸ್ತ್ರ ಮಾಡುತ್ತಾರೆ. ಒಂದು ತಂಬಿಗೆಯಿಂದ ನೀರನ್ನು ಅವರ ತಲೆಯ ಮೇಲಿನಿಂದ ಹುಯ್ಯುತ್ತಾರೆ. ಅದೇ ರೀತಿ 5 ಯಾ 7 ಹೆಂಗಸರು ನೀರು ಹಾಕಿದ ನಂತರ ಅವಳಿಗೆ ಬೇರೆ ಮಡಿ ಬಟ್ಟೆ ಉಡಲು ಕೊಡುತ್ತಾರೆ ಮತ್ತು ಅವಳನ್ನು ಹೊರ ಮನೆಯಲ್ಲಿ ಯಾ ಕೊಟ್ಟಿಗೆಯಲ್ಲಿ ಕೂರಿಸುತ್ತಾರೆ. ರಸಜ್ವಲೆಯಾದ ಮೂರನೇ ದಿವಸ ಮಡಿವಾಳಗಿತ್ತಿಯನ್ನು ಕರೆಸಿ ಶಾಸ್ತ್ರೋಕ್ತವಾಗಿ ಕೆಲವು ಕಾರ್ಯಕ್ರಮಗಳನ್ನು ಜರುಗಿಸುವರು. ನಂತರ ಪುಣ್ಯಾರ್ಚನೆ ಮತ್ತು ಚೌಳು ನೀರಿನಿಂದ ಮನೆಯನ್ನು ಶುದ್ಧ ಮಾಡಿ ಹುಡುಗಿಯನ್ನು ಸ್ನಾನ ಮಾಡಿಸುವರು. ನಂತರ ಮಣ್ಣಿನ ಮಡಿಕೆಯಲ್ಲಿ ನೀರು ತುಂಬಿ ಅದರ ಒಳಗೆ ಒಂದು ಸೆಡೆ (ಸೌಟು) ಹಾಕಿ ಹುಡುಗಿಯ ತಲೆಯ ಮೇಲೆ ಹೊರಸಿಕೊಂಡು ಮನೆ ಹತ್ತಿಸಿ ಬಂದು ನೆಲ್ಲಕ್ಕಿಯಡಿಯಲ್ಲಿ ಇರಿಸುವರು. ಈ ಕ್ರಮಕ್ಕೆ 'ಮಡಿಕೆ ಹಿಡಿಸುವುದು' ಎನ್ನುವರು. ಮೂರನೇಯ ದಿನ ಮಡಿಕೆ ಹಿಡಿಸುವ ಕ್ರಮ ಮಾಡದಿದ್ದರೆ ಹನ್ನೆರಡನೇಯ ದಿವಸ ಆ ಕ್ರಮವನ್ನು ಮಾಡುತ್ತಾರೆ. ಅಲ್ಲಿಯ ತನಕ ಹುಡುಗಿಯ ಕೈಯಲ್ಲಿ ಯಾವ ಕೆಲಸವನ್ನು ಮಾಡಿಸುವುದಿಲ್ಲ ಮೇಲಾಗಿ ಅಡುಗೆ ಮಾಡಬಾರದು.

ಋತುವಾದ ಹದಿನಾರನೆಯ ದಿವಸ ಋತುಶಾಂತಿ ಲಗ್ನವನ್ನು ಆಚರಿಸುವರು. ಆಗ ನೆರೆಯವರನ್ನು, ಊರಿನವರನ್ನು, ನೆಂಟರಿಸ್ಟರನ್ನು ಆಹ್ವಾನಿಸವರು. ಋತುಶಾಂತಿ

ವಿವಾಹದ ದಿನ ಹುಡುಗಿಯನ್ನು ಸ್ನಾನ ಮಾಡಿಸಿ ಹೊಸ ಸೀರೆ ರವಿಕೆಯನ್ನು ತೊಡಿಸಿ ಆಭರಣಗಳಿಂದ ಶೃಂಗರಿಸಿ ನೆಲ್ಲಕ್ಕಿಯಡಿಯಲ್ಲಿ ಅಥವಾ ಐನ್‌ಮನೆಯ ಕಯ್ಯಾಲೆಯಲ್ಲಿ ಕುಳ್ಳಿರಿಸುತ್ತಾರೆ. ಹುಡುಗಿಯ ತಂದೆ ತಾಯಿಯರು ಮತ್ತು ನೆರೆದವರೆಲ್ಲರೂ ಅಕ್ಷತೆ (ಅಕ್ಕಿ ಕಾಳು) ಹಾಕಿ ಆಶೀರ್ವದಿಸುವರು ಮತ್ತು ಉಡುಗೊರೆಯನ್ನು ಕೊಡುವರು. ಆನಂತರ ಸೇರಿದವರೆಲ್ಲರಿಗೂ ಭೋಜನವನ್ನೀಯುವರು.

ಕುಟುಂಬದ ಋತುಮತಿಯಾದ ಹೆಣ್ಣಿನ ಹೊಲೆ ತೊಲಗಿಸದೆ ಹೋದರೆ ಆ ಕುಟುಂಬದಲ್ಲಿ ನಡೆಯುವ ಹರಿಸೇವೆಗೆ ಗೊನೆ ಕಡಿಯಬಾರದು ಮತ್ತು ಅವಳದೆ ಮದುವೆಗೆ ಚಪ್ಪರದ ಕಂಬವನ್ನು ನೆಡಬಾರದು ಎಂಬ ನಿಯಮವಿದೆ.

‘ಓರ್ವ ಮಹಿಳೆ ವಿದ್ಯಾವಂತಳಾದರೆ ಅವಳಿಂದ ಸಮಗ್ರ ಕುಟುಂಬವು ವಿದ್ಯಾ ಸಂಸ್ಕಾರ ಪಡೆಯುತ್ತದೆ ಮತ್ತು ತನ್ಮೂಲಕ ಸಮಾಜದ ಉನ್ನತಿಯಾಗುತ್ತದೆ. ಮೊದಲು ನೀವು ಮಹಿಳೆಯರನ್ನು ವಿದ್ಯಾವಂತರನ್ನಾಗಿ ಮಾಡಿ.’

– *ಗಾಂಧೀಜಿ*

# ಗೌಡರ ವಿವಾಹ ಪದ್ಧತಿಗಳು

**ಪೂರ್ವಜರು ಹುಡುಗನಿಗೆ ಹುಡುಗಿಯನ್ನು ಗೊತ್ತುಪಡಿಸುವ ರೀತಿ:**

ಗೌಡ ಜನಾಂಗದಲ್ಲಿ ವಿವಾಹ ಪ್ರಾಯಕ್ಕೆ ಬಂದ ಹುಡುಗಿ (ಕನ್ಯೆ) ಇದ್ದ ಮನೆಗೆ ಹುಡುಗನ ಕಡೆಯ ಪೋಷಕರು ಯಾ ಸಂಬಂಧಿಕರು ಒಬ್ಬ ಹಿತ ಚಿಂತಕರನ್ನು ಕಳುಹಿಸಿ ಅವರು ಮದುವೆ ಮಾಡುವ ಅಭಿಪ್ರಾಯವಿದ್ದಲ್ಲಿ ಅವರ ಕುಲಗೋತ್ರ, ಸ್ಥಿತಿಗತಿಗಳನ್ನು ತಿಳಿದು, ಹುಡುಗನ ಕಡೆಯ ಸ್ಥಿತಿಗತಿಗಳನ್ನು ಅವರಿಗೆ ತಿಳಿಸಿ ನೆಂಟಸ್ಥಾನ ಬೆಳೆಸುವ ಅಭಿಪ್ರಾಯ ತಿಳಿದು ಬಂದಲ್ಲಿ ಹಿತ ಚಿಂತಕನು ಬಂದು ವರನ ಪೋಷಕರಲ್ಲಿ ತಿಳಿಸುವನು. ನಂತರ ಶುಭ ದಿನ ನೋಡಿ ಹಿತ ಚಿಂತಕರೊಡನೆ ವರನ ಹಿರಿಯರು ಕನ್ಯೆಯ ಮನೆಗೆ ಹೋಗುವರು. ಕನ್ಯೆಯ ಮನೆಯಲ್ಲಿ ಅತಿಥಿಗಳನ್ನು ಸ್ವಾಗತಿಸವರು.

**ಪ್ರಥಮ ಮನೆಗೆ ಹೋಗುವ ಕ್ರಮ :**

ಹಿಂದಿನ ಕಾಲದಲ್ಲಿ ಸಂಧ್ಯಾದೀಪ ಬೆಳಗುವ ಸಮಯದಲ್ಲಿ ಕನ್ಯೆಯ ಮನೆಗೆ ಪ್ರವೇಶಿಸವುದು ಹಿರಿಯ ಪದ್ಧತಿ. ಕನ್ಯೆ ಮನೆಯಲ್ಲಿ ಚಾಪೆ ಹಾಕಲ್ಪಟ್ಟಿದ್ದು, ಆ ಚಾಪೆಯಲ್ಲಿ ಮನೆಗೆ ಮುಖವಾಗಿ ಪಡ ಸಾಲೆಯಲ್ಲಿ ನೆಂಟರು ಕುಳಿತುಕೊಳ್ಳುವದು. ಲೋಕಾಭಿರಾಮ ಮಾತನಾಡುತ್ತಾ ಆ ರಾತ್ರಿ ಅಲ್ಲಿಯೇ ತಂಗವರು. ಮರುದಿನ ಮುಂಜಾನೆ ಎದ್ದು ನೆಂಟರು ಕೈ ಕಾಲು ತೊಳೆದು ಕನ್ಯೆಯ ತಂದೆ ತಾಯಿಯವರೊಡನೆ ಸುತ್ತುವರಿ ಮಾತನಾಡುತ್ತಾ ಮಾತು ಪ್ರಾರಂಭಿಸುವರು.

'ಹಣ್ಣು ಇದ್ದ ಮರಕ್ಕೆ ಹಕ್ಕಿಗಳು ಬಂದಂತೆ ಹೆಣ್ಣು ಇದ್ದ ಮನೆಗೆ ಗಂಡು ಬರುವುದು ಸಹಜ' ಎನ್ನುವಂತೆ ನಿಮ್ಮ ಮನೆಯ ಒಂದು ದೀವಿಗೆಯನ್ನು ಪಡಕೊಂಡು ಹೋಗಿ ನಮ್ಮ ಮನೆಯಲ್ಲಿ ಬೆಳಗಿಸಬೇಕೆಂದು ನಮ್ಮ ಅಭಿಪ್ರಾಯವೆನ್ನುವರು. ಕನ್ಯೆಯ ಕಡೆಯವರಿಗೆ ಸರಿ ಕಂಡು ಬಂದಲ್ಲಿ ಮುಂದಿನ ನೆಂಟಸ್ಥಾನಕ್ಕೆ ಸಿದ್ಧರಿದ್ದರೆ ಯಾವುದಕ್ಕೂ ಬಂಧು ಬಳಗ ಮನೆಯವರನ್ನು ತಿಳಿದು ಹುಡುಗನನ್ನು ನೋಡಿ, ಆ ಮೇಲೆ ಮುಂದಿನ ವಿಚಾರಗಳನ್ನು ತಿಳಿಸುತ್ತೇವೆ ಎಂದು ಮಾತು ಮುಗಿಸುವರು. ಹುಡುಗನನ್ನು ಬರಮಾಡಿಕೊಳ್ಳುವ ದಿನವನ್ನು ನಿಶ್ಚಯಿಸಿ ನೆಂಟರನ್ನು ಕಳುಹಿಸಿಕೊಡುತ್ತಾರೆ. ಮನೆಗೆ ಬಂದು ಹುಡುಗನ ತಂದೆ ತಾಯಿ ಹುಡುಗಿಯ ಗುಣ ನಡತೆ ರೂಪ ಲಾವಣ್ಯವನ್ನು

ಹುಡುಗನಿಗೆ ತಿಳುಸುವುದಲ್ಲದೆ, ನೀ ಇಂತಾ ದಿನ ನೆಂಟರಲ್ಲಿಗೆ ಹೋಗಿ ಸಂಸ್ಕೃತಿಯ ಕಾಲದಲ್ಲಿ ಸಾಧಾರಣವಾಗಿ ಹುಡುಗನೇ ಹುಡುಗಿಯನ್ನು ನೋಡಿ ನಂತರ ಮನೆಯವರನ್ನು ಕಳುಹಿಸುವ ಕ್ರಮ.

ಗೊತ್ತುಪಡಿಸಿದ ಶುಭ ದಿನದಂದು ಹುಡುಗನು ಹುಡುಗಿಯ ಮನೆ ಹಿತ ಚಿಂತಕರೊಡನೆ ಯಾ ಕುಟುಂಬದ ಗಳೆಯರೊಡನೆ ಹೋಗಿ ಹುಡುಗನು ಹುಡುಗಿಯನ್ನು ಹುಡುಗಿಯು ಹುಡುಗನನ್ನು ನೋಡಿಕೊಳ್ಳುವರು. ಹುಡುಗಿಯ ತಂದೆ ತಾಯಿ ಮನೆಯವರು ಹುಡಗನ ರೂಪ ಮೈಕಟ್ಟು ಮೆಚ್ಚುಗೆ ಪಟ್ಟಲ್ಲಿ ವರನ ಜೊತೆಯಲ್ಲಿ ಮುಂದೆ ವರನ ಮನೆ ನೋಡುವುದಕ್ಕೆ ಬರುವ ದಿನವನ್ನು ತೀರ್ಮಾನಿಸಿ ಹೇಳಿ ಕಳುಹಿಸವರು.

**ಹುಡುಗನ ಮನೆ ನೋಡುವ ಪದ್ಧತಿ :**

ಪ್ರಪ್ರಥಮ ಬಾರಿಗೆ ಹುಡುಗನ ಮನೆ ನೋಡಲು ಮೂರು ಜನ ಗಂಡಸರು ಇಬ್ಬರು ಮುತ್ತೈದೆಯರು ಸೇರಿ ಗಂಡಿನ ಮನೆಗೆ ಹೋಗಿ ಅವರ ಆಸ್ತಿ, ಅಂತಸ್ತು, ಕೃಷಿ ಮೊದಲಾದವನ್ನು ನೋಡಿ ಇಷ್ಟಪಟ್ಟದಲ್ಲಿ ಮುಂದೆ ಹುಡುಗನ ಮತ್ತು ಹುಡುಗಿಯ ಜಾತಕವಿದ್ದಲ್ಲಿ ಹೋಲಿಸಿ ನೋಡುವುದು ದೇವಸ್ಥಾನದಲ್ಲಿ ಹೂ ತೆಗೆಯಿಸುವುದು, ಗಣ ಕೂಟ ಸರಿ ಕಂಡು ಬಂದಲ್ಲಿ ಒಪ್ಪಿ ವೀಳ್ಯ ಶಾಸ್ತ್ರದ ಕ್ರಮಕ್ಕೆ ದಿನ ನಿಶ್ಚಯಿಸಿ ಬರುವರು. (ಸರಿ ಕಾಣದ ಪಕ್ಷದಲ್ಲಿ ನೆಪ ಮಾತ್ರದ ಕಾರಣ ಕೊಟ್ಟು ತಪ್ಪಿಸುವುದಾಗಿದೆ)

**ಸೋದರ ಮಾತನಾಡಿಸುವುದು:**

ವೀಳ್ಯ ಶಾಸ್ತ್ರಕ್ಕೆ ಮೊದಲು ಒಂದು ನಿಶ್ಚಿತ ದಿನದಲ್ಲಿ ಹುಡುಗಿಯ ಕಡೆಯಿಂದ ಅವಳ ತಂದೆ ತಾಯಿಯವರು ಹುಡುಗಿಯ ಸಮೇತ ಸೋದರ ಮಾವನಲ್ಲಿಗೆ ಹೋಗಿ ನಾವು ಒಂದು ಶುಭ ಕಾರ್ಯವನ್ನು ತೆಗೆಯುವವರಿದ್ದೇವೆ. ಅದಕ್ಕೆ ನಿಮ್ಮಗಳ ಒಪ್ಪಿಗೆ ಇದೆಯೇ ಎಂದು ವಿಚಾರಿಸುವರು. ಆಗ ಸೋದರರದವರೇನಾದರೂ ಆ ಹುಡುಗಿಯನ್ನು ಇಷ್ಟಪಟ್ಟು ತಮ್ಮ ಮನೆ ಹತ್ತಿಸಿಕೊಳ್ಳುವ ವಿಚಾರದಲ್ಲಿ ಆಕ್ಷೇಪಣೆ ಎತ್ತುವರು. ಅದಕ್ಕಾಗಿ ವೀಳ್ಯ ಶಾಸ್ತ್ರದ

ಕ್ರಮಕ್ಕೆ ಮುಂಚಿತವಾಗಿಯೇ ಸೋದರ ಮಾತನಾಡಿಸಬೇಕು. ಅವರ ಒಪ್ಪಿಗೆ ಪಡೆದು ಸೋದರದವರನ್ನು ವೀಳ್ಯ ಶಾಸ್ತ್ರಕ್ಕೆ ಆಹ್ವಾನಿಸಿ ಹಿಂತಿರುಗುವುದು.

**ವೀಳ್ಯ ಶಾಸ್ತ್ರದ ಕ್ರಮ :**

ಶುಭ ದಿನದಂದು ಉಭಯಸ್ತರು ಕಾರ್ಯಕ್ರಮ ನಿಶ್ಚಯಿಸಿ ಕನ್ಯೆಯ ಮನೆಯಲ್ಲಿ ವೀಳ್ಯ ಶಾಸ್ತ್ರಕ್ಕೆ ಏರ್ಪಾಡು ಮಾಡುವರು. ಹುಡುಗಿಯ ಮನೆಯವರು ಬಂಧು ಬಾಂಧವರಿಗೆ, ಊರು ಗೌಡರಿಗೆ, ಮುಖ್ಯಸ್ಥರಿಗೆ ವೀಳ್ಯ ಕೊಟ್ಟು ಹೇಳಿ ಬರಬೇಕು. ಬೇಕು ಬೇಕಾದ ಸಿದ್ಧತೆಗಳನ್ನು ಮಾಡಿ ನೆಂಟರ ಬರವನ್ನು ನಿರೀಕ್ಷಿಸುವವರು. ಹುಡುಗನ ಕಡೆಯಿಂದಲೂ ಅವರ ಬಂಧು ಬಾಂಧವರಿಗೆ ಊರು ಗೌಡರಿಗೆ ಮುಖ್ಯಸ್ಥರಿಗೆ ವೀಳ್ಯ ಕೊಟ್ಟು ವೀಳ್ಯ ಶಾಸ್ತ್ರಕ್ಕೆ ಬರುವುದಕ್ಕೆ ಹೇಳುವರು.

ವೀಳ್ಯ ಶಾಸ್ತ್ರದ ದಿನ 5 / 7 / 9ರ ಮಿತಿಯಲ್ಲಿ ವೀಳ್ಯ ಶಾಸ್ತ್ರಕ್ಕೆ ಕನ್ಯೆಯ ಮನೆಗೆ ಹೋಗಲು ತೀರ್ಮಾನ ಮಾಡಿ, ಅವರೆಲ್ಲರು ವರನ ಮನೆಗೆ ಬೆಳಗ್ಗೆ ಬಂದು ಸೇರಿ, ದೇವರ ದೀಪ ಹಚ್ಚಿ ನಾವು ಹೋಗುತ್ತಿರುವ ಕಾರ್ಯ ಶುಭವಾಗಲಿ ಎಂದು ದೇವರಲ್ಲಿ ಪ್ರಾರ್ಥಿಸಿ, ವೀಳ್ಯದೆಲೆ, ಅಡಿಕೆ, ಅಡಿಕೆ ಹೋಳು ಎಲ್ಲವನ್ನು ಒಂದು ಕೈಚೀಲದಲ್ಲಿ ತುಂಬಿ ನೆಂಟರಲ್ಲಿಗೆ ಕೊಡೆ ಕೋಲಾಗಿ ಹೋಗುವುದು. ಕನ್ಯೆಯ ಕಡೆಯವರು, ಕುಳಿತುಕೊಳ್ಳುವುದಕ್ಕೆ ಹಾಕಿದ ಚಾಪೆಯಲ್ಲಿಯೇ ಕುಳಿತುಕೊಳ್ಳುವುದು. ಆಗ ಹುಡುಗಿಯ ಕಡೆಯವರು ಬಂದ ನೆಂಟರ ಕೊಡೆ ಕೋಲು ಕೈಚೀಲ ತೆಗೆದಿಡುವುದಕ್ಕೆ ಕೇಳುವರು. ಕೊಡೆ ಕೋಲನ್ನು ಮಾತ್ರ ಕೊಟ್ಟು ಕೈಚೀಲವನ್ನು ತಮ್ಮ ಬಳಿಯಲ್ಲಿಯೇ ಜೋಪಾನವಾಗಿ ಇಟ್ಟುಕೊಳ್ಳುವುದು. ಹುಡುಗಿಯ ಕಡೆಯವರು ಅಲ್ಲಿ ನೆರೆದವರ ಪರಿಚಯ ಮಾಡಿಕೊಡುವರು. ಆಗ ಕಿರಿಯರ, ಹಿರಿಯರ ಪಾದ ಮುಟ್ಟಿ ನಮಸ್ಕರಿಸುವುದರೊಂದಿಗೆ ಪರಿಚಯ ಮಾಡಿಕೊಳ್ಳುವುದು. ನಂತರ ಶುಭ ಮುಹೂರ್ತವಿದ್ದಂತೆ ನಿಶ್ಚಯಿಸಿದ ಸಮಯಕ್ಕೆ ಸರಿಯಾಗಿ ಕನ್ಯೆಯ ಭಾಗದ ಮುಖ್ಯಸ್ಥರು ಮನೆಯ ದೇವರ ಮಣೆ ಇಟ್ಟು, ಒಂದು ಮಣೆಯ ಮೇಲೆ ನಂದಾದೀಪ ಹಚ್ಚಿಟ್ಟು ಅದರ ಪಕ್ಕದಲ್ಲಿ ಕಂಚಿನ ಬಟ್ಟಲಲ್ಲಿ 5 ಎಲೆ ಒಂದು ಅಡಿಕೆ ಸ್ವಲ್ಪ ಬೆಳ್ತಕ್ಕಿ ಹಾಕಿ ಇಡುವರು. ದೀಪದ ಇನ್ನೊಂದು ಬದಿಯಲ್ಲಿ ಇರುವ ಇನ್ನೊಂದು ಮಣೆಯಲ್ಲಿ ಒಂದು ಕಂಚಿನ ಚೆಂಬಿನಲ್ಲಿ ನೀರು ಮತ್ತು ಹರಿವಾಣದಲ್ಲಿ 5 ಎಲೆ ಒಂದು ಅಡಿಕೆ

ಸ್ವಲ್ಪ ಬೆಳ್ತಕ್ಕಿ ಹಾಕುವರು. ಊದುಕಡ್ಡಿ ಹಚ್ಚಿ ಇಡುವರು. ಆ ಮೇಲೆ ಒಂದು ಚೆಂಬು ನೀರು ಸಭೆಗೆ ಕೊಟ್ಟು, ವೀಳ್ಯ ಶಾಸ್ತ್ರದ ಕ್ರಮಕ್ಕೆ ಸಿದ್ಧವಾಗಿದೆ. ಊರವರು, ನೆಂಟರು ಸರ್ವರೂ ಶುಭ ಕಾರ್ಯವನ್ನು ಸಾಂಗಾವಾಗಿ ನೆರವೇರಿಸಿಕೊಡಿರೆಂದು ಮನೆ ಯಜಮಾನವರು ಕೇಳಿಕೊಳ್ಳುವರು.

ಅನಂತರ ಹುಡುಗನ ಕಡೆಯಿಂದ ಒಬ್ಬರು ಕಚ್ಚೆ ಪಂಚೆ ಹಾಕಿ, ಬಿಳಿ ಶರ್ಟು ಹಾಕಿ, ಜರಿ ಪೇಟ ಕಟ್ಟಿ ಹೆಗಲಿಗೆ ಶಾಲು ಹಾಕಿಕೊಂಡು ಮುಂದಾಗಿಯೂ ಉಳಿದವರು ಜೊತೆಯಲ್ಲಿ ವೀಳ್ಯದೆಲೆ ಅಡಿಕೆ ಚೀಲ ಹಿಡಿದುಕೊಂಡು ಹಿಂದಿನಿಂದ ಬಂದು ಕಯ್ಯಾಲೆ (ಚೌಕಿ)ಯ ಮುಂಭಾಗದಲ್ಲಿ ನಿಲ್ಲುವರು. ಅದೇ ಸಮಯದಲ್ಲಿ ವಧುವಿನ ಕಡೆಯ ಮುಖ್ಯಸ್ಥರು ಮೇಲೆ ಹೇಳಿದ ರೀತಿಯ ಪೋಷಾಕು ಧರಿಸಿ ಚೌಕಿಯಲ್ಲಿ ಇನ್ನಿಬ್ಬರು ಗೃಹಸ್ಥರೊಂದಿಗೆ ಮನೆಯ ಪೂರ್ವಾಭಿಮುಖವಾಗಿ ಚಾಪೆ ಹಾಕಿ ನಂದಾದೀಪವನ್ನು ಉರಿಸಿಟ್ಟ ಸ್ಥಳದಲ್ಲಿ ಕುಳಿತುಕೊಳ್ಳುವರು. ಹುಡುಗನ ಕಡೆಯವರು ಚೌಕಿಯ ಮುಂಭಾಗ ಬಂದು ನಿಂತು ಚೌಕಿಯಲ್ಲಿ ಕುಳಿತ ಗೃಹಸ್ಥರಿಗೆ ನಮಸ್ಕಾರ ಹೇಳಿ ನಂತರ ಅವರು ಬಂದ ಜಿಲ್ಲೆ. ತಾಲೂಕು. ನಾಡು. ಗ್ರಾಮ ಸಾಕ್ಷಿ............... ಇಂತಹವರ ಅನುಮತಿ ಮೇಲೆ (...........ಇರುವಲ್ಲಿ ಹುಡುಗನ ಮನೆ ಯಜಮಾನನ ಹೆಸರು ಹೇಳುವುದು........... (ಇಲ್ಲಿ ಕನ್ಯೆಯ ಕಡೆಯ ಪೂರ್ಣ ವಿವರ ಮತ್ತು ಮನೆ ಯಜಮಾನರ ಹೆಸರು ಹೇಳಿ) ಇವರ ಅನುಮತಿ ಮೇಲೆ ವೀಳ್ಯ ಶಾಸ್ತ್ರ ನಡೆಸುವುದಕ್ಕೆ ಬಂದ ನೆಂಟರು ನಾವು ಎಂದು ಅವರವರ ಗ್ರಾಮಕ್ಕೆ ಸಂಬಂಧಪಟ್ಟಂತೆ ಹೇಳುವುದು. ಆ ಮೇಲೆ ಚೌಕಿಯಲ್ಲಿ ಕುಳಿತುಕೊಳ್ಳಲು ಅನುವು ಕೊಡಬೇಕೆಂದು ಕೇಳಿ ಅನುವು ಆದ ಮೇಲೆ ಕುಳಿತುಕೊಂಡು. ಒಂದು ತಟ್ಟೆಯಲ್ಲಿ ವೀಳ್ಯ ಬಳಸಿ ನಾವು ಬಂದ ಕಾರ್ಯವನ್ನು ಯಾವುದೇ ಕಾರಣಕ್ಕೂ ತೊಂದರೆ ಬಾರದಂತೆ ನೆರವೇರಿಸಿ ಕೊಡಬೇಕೆಂದು ಕೇಳಿಕೊಂಡು, ವೀಳ್ಯ ತಟ್ಟೆಯನ್ನು ನೀರು ಮುಟ್ಟಿ ಚೌಕಿಯಲ್ಲಿ ಕುಳಿತ ಮುಖ್ಯಸ್ಥರ ಹಸ್ತ ಕೊಡಬೇಕು. ಕನ್ಯೆಯ ಕಡೆಯ ಮುಖ್ಯಸ್ಥರು ವೀಳ್ಯ ತೆಗೆದುಕೊಂಡು ಕನ್ಯೆಯ ತಂದೆ ತಾಯಿಯವರಲ್ಲಿ ಸರ್ವರಲ್ಲಿಯು ನಾವು ವೀಳ್ಯ ಕಟ್ಟಿಸಿಕೊಳ್ಳುತ್ತಿದ್ದೇವೆ. ನಿಮ್ಮ ಒಪ್ಪಿಗೆ ಇದೆಯೇ ಎಂದು ಕೇಳುವರು. ಆದಕ್ಕೆ ಎಲ್ಲರೂ ಒಪ್ಪಿಗೆ ಸೂಚಿಸುವರು ಮತ್ತು ಕುಟುಂಬದ ಸರ್ವರಲ್ಲಿಯೂ. ಸೋದರದವರಲ್ಲಿಯೂ ಒಪ್ಪಿಗೆ ಇದೆಯೇ ಎಂದು ಕೇಳುವರು. ಅದಕ್ಕೆ ಎಲ್ಲರೂ

ಒಪ್ಪಿಗೆ ಸೂಚಿಸುವರು ಮತ್ತು ಕುಟುಂಬದ ಸರ್ವರಲ್ಲಿಯೂ ಸೋದರರದವರಲ್ಲಿಯೂ ಒಪ್ಪಿಗೆ ಇದೆಯೇ ಎಂದು ಕೇಳುವ ಪದ್ಧತಿ ಇದೆ. ಬಂದ ನೆಂಟರು ಚೌಕಿಯಲ್ಲಿ ಕುಳಿತುಕೊಳ್ಳಲು ಅನುವು ಕೇಳಿ ಅನುವು ಪಡೆದ ನಂತರ ಚೆಂಬಿನಲ್ಲಿ ಇಟ್ಟಿದ್ದ ನೀರನ್ನು ಮುಟ್ಟಿ ಎದುರು ಭಾಗಕ್ಕೆ ಎಲ್ಲಾ ವೀಳ್ಯದ ತುದಿಯು ಇರುವಂತೆ 5 ಎಲೆ, ಒಂದು ಅಡಿಕೆ, ಕಂಚಿನ ಬಟ್ಟಲಿಗೂ, 5 ಎಲೆ, ಒಂದು ಅಡಿಕೆ ಹಿತ್ತಾಳೆಯ ಹರಿವಾಣಕ್ಕೂ ಬಳಸಿ ನೀರು ಮುಟ್ಟಿ ಎದ್ದು ನಿಂತು ಪದ್ಧತಿ ಪ್ರಕಾರ 'ಹತ್ತು ಕುಟುಂಬ, ಹದಿನೆಂಟು ಗೋತ್ರ, ಬಂಧು ಬಾಂಧವರು, ನೆಂಟರು ಇಷ್ಟರು, ಸರ್ವ ಸ್ವಜಾತಿ ಗೃಹಸ್ಥರಲ್ಲಿ ಕುಲಸ್ತರ ಸಭೆಯಲ್ಲಿ ಸಮಸ್ತರ ಸಂಗಡ ಕೇಳಿ ನೆಲ್ಲಕ್ಕಿ ದೇವಿಗೆ ಅಡಿಯಲ್ಲಿ ವರನ ಗೋತ್ರ, ಹೆಸರು ವಿವರ ಹೇಳಿ, ವಧುವಿನ ಗೋತ್ರ, ಹೆಸರು ವಿವರ ಹೇಳಿ 1) ಶಾಲಾವಳಿ ವೀಳ್ಯ ಕಟ್ಟುವಂತವೆ ಎಂದು ಹೇಳಿ ವೀಳ್ಯದ ತಟ್ಟೆಯನ್ನು ವರನ ಕಡೆಯ ಮುಖ್ಯಸ್ಥರು ವಧುವಿನ ಕಡೆಯ ಮುಖ್ಯಸ್ಥರ ಕೈಗೆ ಕೊಡುವುದು. (ಇಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರ ಒಕ್ಕಣೆಯನ್ನು ಮೂರು ಮೂರು ಬಾರಿ ಹೇಳುವುದು) ಆಗ ಸಭೆಯ ಸರ್ವರೂ ಒಳ್ಳೆಯ ಕಾರ್ಯವಂತ್ತೇವೆ ಎಂದು ಒಕ್ಕೊರಲಿನಿಂದ ಶುಭ ಹಾರೈಸುವರು. (ವೀಳ್ಯ ಬಳಸುವಾಗ ಮೂರು ಮೂರು ಬಾರಿ ಅಡಿಕೆ ಮತ್ತು ವೀಳ್ಯವನ್ನು ಬಳಸುವುದು) ಪ್ರತಿ ವೀಳ್ಯ ಕಟ್ಟುವಾಗಲೂ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ವೀಳ್ಯ ಕಟ್ಟುವುದು.

2) 7 ಕವಳೆ ವೀಳ್ಯ, 7 ಅಡಿಕೆ ಬಳಸಿ ಮಾತು ಕರಾರು ವೀಳ್ಯ ಕೊಡುವರು. 3) 9 ಕವಳೆ ವೀಳ್ಯ, 9 ಅಡಿಕೆ ಬಳಸಿ ಶಾಸ್ತ್ರದ ವೀಳ್ಯ ಕೊಡುವರು. 4) 5 ಕವಳೆ ವೀಳ್ಯ, 5 ಅಡಿಕೆ ಬಳಸಿ ಲಗ್ನ ಕುರಿ ವೀಳ್ಯ ಕೊಡವರು. 5) 7 ಕವಳೆ ವೀಳ್ಯ, 7 ಅಡಿಕೆ ಬಳಸಿ ಬಣ್ಣ ಬಂಗಾರದ ವೀಳ್ಯವನ್ನು ಕೊಡವರು. ಬಣ್ಣ ಬಂಗಾರದ ವೀಳ್ಯವನ್ನು ಕೊಡುವುದಕ್ಕೆ ಮುಂಚಿತವಾಗಿ ವಧುವಿಗೆ ಬೇಕಾದ ಚಿನ್ನಾಭರಣಗಳ, ಬಟ್ಟೆಗಳ ವಿವರ ಕೇಳುವ ಪದ್ಧತಿ ವಿಧುವಿನ ಕಡೆಯ ಗೃಹಸ್ಥರಿಗೆ ಮತ್ತು ಬೇಕಾದ ಬಟ್ಟೆ ಬರೆ ಆಭರಣಗಳನ್ನು ವಿವರಿಸುವುದಾಗಿದೆ. 6) 9 ಕವಳೆ ವೀಳ್ಯ 9 ಅಡಿಕೆ ಬಳಸಿ ಗುರುವೀಳ್ಯವನ್ನು ಕೊಟ್ಟು ಇನ್ನುಳಿದ 3 ವೀಳ್ಯವಾದ 1) ತಂದೆ ವೀಳ್ಯ 2) ತಾಯಿ ವೀಳ್ಯ 3) ಮಹಾನಾಡು ವೀಳ್ಯವನ್ನು ದಿಬ್ಬಣ ಹೋಗಿ ಬಣ್ಣ ಬಂಗಾರವನ್ನುಡುವ ಸಮಯದಲ್ಲಿ ಕಟ್ಟವುದಾಗಿದೆ. (ಸೂಚನೆ ಕೆಲವು ಕಡೆ 7 ವೀಳ್ಯವನ್ನು ಕೆಲವು ಕಡೆಗಳಲ್ಲಿ 12 ವೀಳ್ಯವನ್ನು ಕಟ್ಟುವುದು.

ಕೊಡಗು ಗೌಡ ವಿದ್ಯಾಸಂಘವು 9 ವೀಳ್ಯಗಳಿಗೆ ಸೀಮಿತಗೊಳಿಸಿ ಬರೆದುದಾಗಿದೆ) ವೀಳ್ಯ ಶಾಸ್ತ್ರದ ಸಮಯದಲ್ಲಿ 5 ಎಲೆ, 1 ಅಡಿಕೆ ಹುಡುಗನಿಗೂ ಹಾಗೂ ಹುಡುಗಿಗೂ ಕೊಡಬೇಕು. ಅದನ್ನು ಅವರು ಸೇವಿಸುವುದಾಗಲಿ ಯಾ ಧಾರೆ ತನಕ ಸೆರಗಿನಲ್ಲಿ ಕಟ್ಟಿಕೊಳ್ಳುವುದಾಗಲಿ ಹಿರಿಯರಿಂದ ನಡೆದು ಬಂದ ಪದ್ಧತಿಯಾಗಿದೆ. ವೀಳ್ಯ ಶಾಸ್ತ್ರದ ದಿವಸ ವಧುವು ಸ್ನಾನಾದಿಗಳನ್ನು ಮುಗಿಸಿ ಮಡಿಯಾದ ಬಿಳಿ ಸೀರೆಯನ್ನು ಉಟ್ಟಿರಬೇಕು. ವೀಳ್ಯ ಶಾಸ್ತ್ರದ ನಂತರ ಹುಡುಗ (ವರ) ಯಾ ಹುಡುಗಿ (ವಧು) ಸೋದರ ಮಾವನ ಮನೆಯನ್ನು ಬಿಟ್ಟು ಬೇರೆಲ್ಲಿಯೂ ಉಳಿಯಕೂಡದು. ಬೇರೆ ಯಾವುದೇ ಮದುವೆ ಚಪ್ಪರದ ಮೇಲ್ಕಟ್ಟಡಿಗೆ ಪ್ರವೇಶಿಸಕೂಡದು. ಧಾರೆ ಕಾರ್ಯದ ಸಮಯದವರೆಗೆ ವಧುವರರು ಒಬ್ಬರನ್ನೊಬ್ಬರು ಸಂಧಿಸಕೂಡದು. ವರನು ಎಣ್ಣೆ ಅರಶಿಣ ಮಾಡಿ ಮುಖ ಕೌರ ಮಾಡುವಲ್ಲಿಯವರೆಗೆ ಮುಖ ಕ್ಷೌರ ಮಾಡಕೂಡದು ಎಂದು ಹಿರಿಯ ಕಾಲದಿಂದಲೇ ನಡೆದು ಬಂದ ಪದ್ಧತಿಯಾಗಿದೆ.

ವೀಳ್ಯ ಶಾಸ್ತ್ರ ಆದ ಕೂಡಲೇ ಚೌಕಿಯಲ್ಲಿ ಕುಳಿತು ಲಗ್ನ ಪತ್ರಿಕೆ ಬರೆಯುತ್ತಾರೆ. ಇದರಲ್ಲಿ ಸಾಧಾರಣವಾಗಿ ಈ ಮನೆ ಸ್ಥಾನದಿಂದ ಇಂಥಾ ಮನೆ ಸ್ಥಾನಕ್ಕೆ ಇಂಥವರ ಅನುಮತಿ ಮೇರೆ ಇವರ ಮಗಳನ್ನು ಇಂಥವರ ಮಗನಿಗೆ ಕೊಡುವಂತೆ ಒಪ್ಪಿ ಬರೆದ ಕರಾರು ಪತ್ರವಷ್ಟೇ ಪ್ರಾಮುಖ್ಯವಾಗಿರುತ್ತದೆ. ಇದಕ್ಕೆ ಲಗ್ನ ಪತ್ರಿಕೆ ಎಂದು ಹೇಳುವರು. ಇದರಲ್ಲಿ ಸಾಧಾರಣವಾಗಿ ಪೂರ್ಣ ವಿವರಗಳು ಇರುವವು.



ಉದಾ:-

# ಮಾದರಿ ಲಗ್ನ ಪತ್ರಿಕೆ

## ॥ ಶ್ರೀ ಕುಲದೇವತಾ ಪ್ರಸನ್ನ ॥

ಸನ್ ................ನೇ ಇಸವಿ ತಾರೀಕು....................ರಲ್ಲಿ.............. ಜಿಲ್ಲಾ........................ ತಾಲೂಕು......................... ಗ್ರಾಮದ........................ ಮನೆ...........................ನವರ ಅನುಮತಿ ಮೇರೆಗೆ......................ನವರ ಪುತ್ರಿ ಸೌಭಾಗ್ಯವತಿ....................................ಎಂಬ ವಧುವನ್ನು ............................ ಜಿಲ್ಲಾ............................ ತಾಲೂಕು......................... ನಾಡು...........................ಗ್ರಾಮದ..........................ನವರ ಅನುಮತಿ ಮೇರೆ...................................ನವರ ಪುತ್ರ ಚಿರಂಜೀವಿ ರಾರಾಜಿಸುವ..........................ಎಂಬ ವರನಿಗೆ ಪಾಣಿಗ್ರಹಣ ಮಾಡಿಕೊಡುವುದಾಗಿ ಗುರುಹಿರಿಯರಿದ್ದು ನಿಶ್ಚಯಿಸಿರುತ್ತೇವೆ. ಸದ್ರಿ ವಿವಾಹ ಕಾರ್ಯವನ್ನು ಇದೇ.........................................ತಿಂಗಳು......................... ತಾರೀಕು.............................. ವಾರ ರಾತ್ರಿ / ಬೆಳಗ್ಗೆ...................ಸಮಯಕ್ಕೆ ಸರಿಯಾಗಿ ಸಲ್ಲುವ ಶುಭ ಲಗ್ನದಲ್ಲಿ ಧಾರಾ ಕಾರ್ಯವನ್ನು ವಧುವಿನ ಮನೆಯಲ್ಲಿ / ದೇವಸ್ಥಾನದಲ್ಲಿ / ಕಲ್ಯಾಣ ಮಂಟಪದಲ್ಲಿ ನೆರವೇರಿಸುವಂತೆಯೂ ಗೌಡ ಸಮಾಜದ ಪದ್ಧತಿಯಂತೆ ವಿವಾಹ ಕಾರ್ಯವನ್ನು ಉಭಯಸ್ಥರು ಕೂಡಿ ಸಾಂಗವಾಗಿ ನೆರವೇರಿಸಿಕೊಳ್ಳುವಂತೆ ಈ ಕೆಳಗೆ ಸಹಿ ಮಾಡಿದವರ ರೂಬು ರೂಬು ಒಪ್ಪಿ ಬರೆದ ಲಗ್ನ ಪತ್ರಿಕೆಗೆ ಶುಭಮಸ್ತು.

| ಗೃಹಸ್ಥರ ರುಜು | ಕುಟುಂಬಸ್ಥರ ರುಜು |
|---|---|
| 1.................................................. | 1............................................ |
| 2.................................................. | 2............................................ |
| 3.................................................. | 3............................................ |
| 4.................................................. | 4............................................ |

ಬರೆದವರ ರುಜು...........................................................................

ಗೃಹಸ್ಥರು ಎಂಬಲ್ಲಿ ವೀಳ್ಯ ಶಾಸ್ತ್ರಕ್ಕೆ ಬಂದ ಮಹನೀಯರು, ಕುಟುಂಬಸ್ಥರು ಎಂಬಲ್ಲಿ ವಧುವಿನ ತಂದೆ ಮತ್ತು ಕುಟುಂಬದವರು ರುಜು ಮಾಡಿದ ನಂತರ ಬರೆದವರು ರುಜು ಮಾಡುವುದಾಗಿದೆ. ಹಾಗೆ ಬರೆದ ಲಗ್ನ ಪತ್ರಿಕೆಯ ಎರಡು ಪ್ರತಿ ಮಾಡಿ ನಾಲ್ಕು ಮೂಲೆಗಳಿಗೆ ಅರಶಿನ ಎಣ್ಣೆ ಇಡುವುದು. ವೀಳ್ಯ ಶಾಸ್ತ್ರ ಮುಗಿದು ಲಗ್ನ ಪತ್ರಿಕೆ ಬರೆದು ರುಜು ಮಾಡಿದ ನಂತರ, ನೀರು ಮುಟ್ಟಿ ಚೌಕಿಯಿಂದ ಏಳಲು ಅನುವು ಪಡೆದು ಏಳುವುದು. (ಇಲ್ಲಿ ಏಳುವುದಕ್ಕೆ ಮುಂಚಿತವಾಗಿ ವರನ ಭಾಗದ ನೆಂಟರು ವಧುವಿನ ಭಾಗದ ಗೃಹಸ್ಥರಿಗೆ ತಾಂಬೂಲ ಕೊಡುವ ಪದ್ಧತಿ ಮೊದಲಿನಿಂದಲೇ ನಡೆದು ಬಂದಿದೆ.)

ಕೆಲವು ಕಡೆ ಅದೇ ದಿನ ಬಂದ ನೆಂಟರು ಮತ್ತು ಊರಿನ ಮಹನೀಯರು ಸೇರಿ ಗುರುಕಾರಣರವರಿಗೆ ಅವಲು ಹಾಕುವ ಕ್ರಮವನ್ನು ಇಟ್ಟುಕೊಳ್ಳುವರು. ಆಗ ಪ್ರಾರ್ಥಿಸುವ ಕ್ರಮವೇನೆಂದರೆ 'ನಾವು ಎಲ್ಲರೂ ಸೇರಿ ಈ ಒಂದು ಶುಭ ಕಾರ್ಯವನ್ನು ಎತ್ತಿ ಹಿಡಿದಿದ್ದೇವೆ. ಆದ್ದರಿಂದ ಈ ಕಾರ್ಯಕ್ಕೆ ಯಾವ ತೊಂದರೆಯು ಬಾರದಂತೆ ನಮ್ಮ ಗುರುಕಾರಣರಿದ್ದು ನಮ್ಮ ಎಲ್ಲಾ ದೈವಗಳು ಸಂತೋಷಪಟ್ಟು ಇಟ್ಟ ಎಲೆಯಲ್ಲಾಗಲಿ ಬಳಸಿದ ಅವಲಿನಲ್ಲಾಗಲಿ ತಪ್ಪುಗಳಿದ್ದರೆ ಒಪ್ಪು ಸಾರಿಸಿಕೊಂಡು ಬರುವಂತ ಆ ಪುಣ್ಯ ಕೀರ್ತಿ ಸ್ವಾಮಿಗೆ ಕೂಡಿದು' ಎಂದು ಪ್ರಾರ್ಥಿಸಿ ದೀಪಕ್ಕೆ ಅಕ್ಕಿ ಹಾಕಿ ಕೈ ಮುಗಿಯುವರು. ವಧುವು ಹಿರಿಯರ ಪಾದ ಮುಟ್ಟಿ ನಮಸ್ಕಾರ ಮಾಡಿ ಆಶೀರ್ವಾದ ಪಡೆಯಬೇಕು.

ಆ ದಿನ ಬಂದ ನಂಟರು ಅಲ್ಲಿಯೇ ತಂಗಿ ಮರುದಿನ ಬೆಳಗ್ಗೆ ದೇವರ ದೀಪ ಹಚ್ಚಿ ನೆಲ್ಲಕ್ಕಿ ಅಡಿಯಲ್ಲಿ ಮೊದಲ ದಿನ ಬರೆದ ಲಗ್ನ ಪತ್ರಿಕೆಯನ್ನು ಎದುರುಬದುರಾಗಿ ನಿಂತು ಬದಲಿಸುವುದು ಲಗ್ನ ಪತ್ತಿಕೆಯನ್ನು ಬದಲಿಸುವ ಸಮಯದಲ್ಲಿ ವಧುವಿನ ಕುಟುಂಬದ ಹಿರಿಯರು (ಪಟ್ಟೆದಾರ) ನಮ್ಮ ಮನೆಯಿಂದ ಕೊಡುವ ಒಂದು ದೀವಿಗೆಯು ನಿಮ್ಮ ಮನೆಯಲ್ಲಿ ಜ್ಯೋತಿಯಂತೆ 'ಪ್ರಕಾಶಿಸಲಿ' ಎಂಬುದಾಗಿ ಒಕ್ಕಣೆಯ ಮಾತನ್ನು ಹೇಳಿ ಕೊಡುವುದಾಗಿದೆ. ಇಲ್ಲಿಯು ವಧುವು ಹಿರಿಯ ಆಶೀರ್ವಾದವನ್ನು ಬೇಡುವುದು.

**ವಿವಾಹಕ್ಕೆ ಹೇಳುವ ಕ್ರಮ :**

ಹಿಂದಿನ ಕಾಲದಲ್ಲಿ ವಿವಾಹ ತೆಗೆಯುವ ಮನೆಯವರು, ಎಲೆ ಅಡಿಕೆಯನ್ನು ಕೈ ಚೀಲದಲ್ಲಿ ತುಂಬಿಕೊಂಡು ಮನೆ ಮನೆಗೆ ಹೋಗಿ ವೀಳ್ಯ ಕೊಟ್ಟು ವಿವಾಹಕ್ಕೆ ಆಮಂತ್ರಿಸುತ್ತಿದ್ದರು. ಈಗ ಮುಂದುವರಿದ ನವೀನ ರೀತಿಯಲ್ಲಿ ಆಮಂತ್ರಣ ಪತ್ರಿಕೆಗಳನ್ನು ಅಚ್ಚು ಹಾಕಿಸಿ ಹಂಚುವ ವಾಡಿಕೆಯಾಗಿದೆ. ಕುಟುಂಬದವರಿಗೆ, ಸೋದರ ಮಾವನಿಗೆ, ಊರು ಗೌಡರಿಗೆ / ಮುಖ್ಯಸ್ಥರಿಗೆ ಹಾಗೂ ಜನಾಂಗದ ಇತರ ಹಿರಿಯರಿಗೆ ಪತ್ರಿಕೆಯೊಂದಿಗೆ ವೀಳ್ಯವನ್ನು ತಟ್ಟೆಯಲ್ಲಿಟ್ಟು ಪಾದ ಮುಟ್ಟಿ ನಮಸ್ಕಾರ ಮಾಡಿ ವಿವಾಹಕ್ಕೆ ಸರ್ವರೂ ಬರಬೇಕು ಮತ್ತು ವಿವಾಹ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಡಬೇಕು ಎಂದು ಈಗಲೂ ಹೇಳುವ ಕ್ರಮವಿದೆ.

**ಸಂಚಿಕಾರ ಕೊಡುವುದು :**

ಮದುವೆಯ ಸಮಾಜದಲ್ಲಿ ಒಲಗ ಮಾಡುವವರಿಗೆ (ವಾದ್ಯ) ಮದುವೆಯ ದಿನವನ್ನು ತಿಳಿಸಿ 5 ವೀಳ್ಯದೆಲೆ, 5 ಅಡಿಕೆಯೊಂದಿಗೆ ಮುದ್ರಿತ ಪತ್ರಿಕೆಯನ್ನು ಕೊಟ್ಟು ಕೊಂಬು ಕಹಳೆಯ ಸಮೇತ ಚಪ್ಪರದ ದಿನವೇ ಬರುವುದಕ್ಕೆ ಹೇಳುವುದು. ಅಂತೆಯೇ ಮಡಿವಾಳನಿಗೆ ಮೇಲ್ಕಟ್ಟು ಕಟ್ಟುವುದಕ್ಕೆ, ಮಡಿ ಹಾಸುವುದಕ್ಕೆ ಮತ್ತು ಇತರ ಕೆಲಸ ಕಾರ್ಯಗಳಿಗೆ ಹಾಗೂ ಗಂಡಿನ ಕಡೆಯವರಾದರೆ ಕ್ಷೌರಿಕನಿಗೂ ವರನ ಮುಖ ಕ್ಷೌರ ಮಾಡುವುದಕ್ಕೆ ಕೂಡ ಎಲೆ ಅಡಿಕೆಯೊಂದಿಗೆ ಮುದ್ರಿತ ವಿವಾಹ ಆಮಂತ್ರಣವನ್ನು ಕೊಡಬೇಕು. ಇದಕ್ಕೆ ಸಂಚಿಕಾರ ಕೊಡುವುದು ಎಂದು ಹೇಳುವರು. ಈ ಸಮಯದಲ್ಲಿ ಅವರವರ ಚಾರ್ಜುಗಳ ಬಗ್ಗೆ ಮಾತನಾಡಿಕೊಳ್ಳುವರು.

**ಚಪ್ಪರ ಹಾಕುವುದು ಮತ್ತು ಸಮಾರಂಭ :**

ಮದುವೆ ಚಪ್ಪರ ಹಾಕುವುದಕ್ಕೆ 4–5 ದಿನಗಳಿಗೆ ಮುಂಚಿತವಾಗಿ ಕುಟುಂಬಸ್ಥರಿಗೆ, ನೆರೆಕರೆಯವರಿಗೆ ತಿಳಿಸುವುದು. ಅವರು ಕೂಡ ಚಪ್ಪರ ಹಾಕುವುದಕ್ಕೆ ಸಹಕರಿಸುವರು. ಮನೆಯ ಮುಂಭಾಗದ ಚಪ್ಪರವು 12 ಕಂಬಗಳಿಂದ ಪ್ರತ್ಯೇಕವಾಗಿರತಕ್ಕದ್ದು. ಮನೆಯ ಮೆಟ್ಟಿಲಿಗೆ ನೇರವಿರುವ ಮಧ್ಯದ 4 ಕಂಬಗಳಲ್ಲಿ ಬಲಭಾಗದ ಒಂದು ಕಂಬವನ್ನು ಹಾಲೆ ಮರದ ಕಂಬ (ಅಥವಾ ಹಾಲು ಬರುವ ಫಲ ವೃಕ್ಷದ ಕಂಬ) ಹಾಕುವುದಕ್ಕಾಗಿ

ಬಿಡುವುದು. ದಿಬ್ಬಣ ಬಂದು ನಿಲ್ಲುವ ಚಪ್ಪರದ ಎದುರಿನ ಕಂಬಳಿಗೆ ಮತ್ತು ಆರತಿ ಮಾಡುವ ಮೊದಲ ಎರಡು ಕಂಬಗಳಿಗೆ ಗೊನೆಯಿರುವ ಎರಡು ಬಾಳೆಗಳನ್ನು ಕಟ್ಟಿ ಸೊಪ್ಪು ಹಾಕಿ ತೋರಣ ಕಟ್ಟುವುದು. ಉಳಿದ ಒಂದು ಹಾಲು ಬರುವ ಕಂಬವನ್ನು ಚಪ್ಪರ ಸಮಾರಂಭಕ್ಕೆ ಸಂಜೆ ಸೇರುವ ಊರಿನವರು (ಊರು ಕೂಡುವ ಸಮಯದಲ್ಲಿ) ಹಾಕುವರು. ಈ ಹಾಲು ಬರುವ ಕಂಬವು ಮನೆಯ ಮೆಟ್ಟಲಿಳಿಯುವಾಗ ಬಲಭಾಗಕ್ಕೆ ನಡುವಿನ ಕಂಬವಾಗಿರಬೇಕು. ಇದು ಚಪ್ಪರದ 12 ಕಂಬಗಳ ಪೈಕಿ ನಡುವಿಲ್ಲಿದ್ದು ಇದನ್ನು ಗಣಪತಿಯ ಸಂಕೇತವೆಂದು ಹಾಲು ಬರುವ ಕಂಬವಾಗಿಯೂ ನಡುವಿನಲ್ಲಿ ಇನ್ನುಳಿದ ಮೂರು ಕಂಬಗಳು ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರನ ಸಂಕೇತವಾಗಿಯೂ ಹಾಕುವರು. ಈ ನಾಲ್ಕು ಕಂಬಗಳ ಸುತ್ತಲೂ ಇರುವ ಎಂಟು ಕಂಬಗಳು ತ್ರಿಮೂರ್ತಿಗಳ ಅಷ್ಟದಿಕ್ಪಾಲಕರಾಗಿಯೂ ಇರುವುದು ಎಂದು ಬಲ್ಲವರು ಹಿರಿಯರು ಹೇಳದುದಾಗಿದೆ. ಹಾಲೆ ಮರದ ಕಂಬಕ್ಕೆ ಬಾಳೆಗೊನೆ, ತೆಂಗಿನಕಾಯಿ ಮತ್ತು ಸರಮಾಲೆ ದೀಪಗಳನ್ನು ತೂಗುವರು. ಉಳಿದ ಎಲ್ಲಾ ಕಂಬಗಳಿಗೆ ಚಿಕ್ಕ ಸೌತೆಕಾಯಿಗಳನ್ನು ಆಲಂಕಾರಕ್ಕಾಗಿ ಕಟ್ಟಿ ತೂಗುವುದು.

**ಒಲೆ ಪೂಜೆ ಮಾಡುವುದು :**

ಸಮಾರಂಭಕ್ಕೆ ಅಡಿಗೆ ಮಾಡುವ ಸ್ಥಳವನ್ನು ಮೊದಲೇ ಸಿದ್ಧಪಡಿಸಿರುತ್ತಾರೆ. ಮುತ್ತೈದೆಯರು ಸೇರಿ, ಅಕ್ಕಿ, ತೆಂಗಿನಕಾಯಿ, ಬಾಳೆಹಣ್ಣು, ಎಲೆ ಅಡಿಕೆ ದೀಪದೊಂದಿಗೆ ಅಲ್ಲಿಗೆ ಹೋಗಿ ಸ್ಥಳವನ್ನು ಶುದ್ಧ ಮಾಡಿ ನಂದಾದೀಪ ಹಚ್ಚಿ ಗಣಪತಿಗೆ ಇಟ್ಟು ಒಲೆಯನ್ನು ಅಡುಗೆಗಾಗಿ ಬಿಟ್ಟುಕೊಟ್ಟು ಬರುವುದು.

**ಊರು ಪಂಕ್ತಿ ಕೊಡುವುದು :**

ಕುಟುಂಬದ ಮುಖ್ಯಸ್ಥ ಇಲ್ಲವೇ ಮನೆ ಯಜಮಾನ ಒಂದು ಪಚ್ಚೆಯಲ್ಲಿ ಹುದುರಿ, ತೆಂಗನಕಾಯಿ, ಬಾಳೆಹಣ್ಣು, ಎಲೆ, ಅಡಿಕೆ ಎಲ್ಲವನ್ನೂ ಇಟ್ಟು ಇಂದಿನಿಂದ ನಾಳೆಯ ತನಕ ಜರಗುವ ವಿವಾಹ ಕಾರ್ಯವನ್ನು ಊರಿನವರು, ನೆಂಟರಿಷ್ಟರು, ನೆರೆಕರೆಯವರು ಎಲ್ಲರೂ ಸೇರಿ ಯಾವುದೊಂದು ಕುಂದುಕೊರತೆ ಬಾರದಂತೆ ನೋಡಿಕೊಂಡು ವಿವಾಹ ಕಾರ್ಯವನ್ನು ಸಾಂಗವಾಗಿ ನೆರವೇಸಿಕೊಡಬೇಕು ಎಂದು ಹೇಳಿ ಊರು ಗೌಡರ ಹಸ್ತ / ಮುಖ್ಯಸ್ಥರ ಹಸ್ತ ಪಚ್ಚೆಯನ್ನು ಕೊಟ್ಟು ಸರ್ವರಿಗೂ ಊರು ಪಂಕ್ತಿ ತೆಗೆದುಕೊಳ್ಳಬೇಕು ಎಂದು ನಮಸ್ಕಾರ ಮಾಡುವರು. ನಂತರ

ಮದುವೆಯ ಜವಾಬ್ದಾರಿ ನೆಂಟರು ಮತ್ತು ಊರಿನವರ ಮೇಲೆ ಬಿದ್ದಂತಾಯಿತು. ಒಡನೆಯೇ ಊರು ಗೌಡರು / ಮುಖ್ಯಸ್ಥರು ಮಡಿವಾಳನನ್ನು ಕರೆದು ಅವನಿಗೆ ಕೊಡಬೇಕಾದ ಮರ್ಯಾದೆಯನ್ನು ಕೊಟ್ಟು (ಇಲ್ಲಿ ಮಡಿವಾಳನಿಗೆ ಮರ್ಯಾದೆಯಾಗಿ ಎಲೆ, ಅಡಿಕೆ, ಒಂದು ತೆಂಗಿನಕಾಯಿ, 25 ಪೈಸೆ ಹಣ, ಒಂದು ತಟ್ಟೆಯಲ್ಲಿ ಇಟ್ಟು ಕೊಡುವುದು. ಅಂತೆಯೇ ಓಲಗದವರಿಗೂ, ಗಂಡಿನ ಮನೆಯಾದರೆ ಕ್ಷೌರಿಕನಿಗೂ, ಕೊಡಬೇಕು. ಮಡಿವಾಳನಿಗೆ ಮೇಲ್ಕಟ್ಟು ಕಟ್ಟುವುದಕ್ಕೂ, ಓಲಗದವರಿಗೂ ಮರ್ಯಾದೆ ಕೊಟ್ಟು ವಾದ್ಯ ಮಾಡುವುದಕ್ಕೆ ಅನುಮತಿಯನ್ನು ಕೊಡುವರು)

**ಮೇಲ್ಕಟ್ಟು ಕಟ್ಟುವುದು:**

ತನ್ನ ಮರ್ಯಾದೆಯನ್ನು ತೆಗೆದುಕೊಂಡು ಮಡಿವಾಳನು ಹಾಲೆ ಮರದ ಕಂಬದ ಅಡಿಯಲ್ಲಿ ಮೊದಲು ಗಣಪತಿಗೆ ಇಟ್ಟು (ಒಂದು ಮಣೆಯ ಮೇಲೆ ನಂದಾದೀಪ ಹಚ್ಚಿಟ್ಟು ಒಂದು ಕುಡಿಬಾಳೆ ಎಲೆಯ ಮೇಲೆ 5 ಕುಡ್ತೆ ಅಕ್ಕಿ ಅದರ ಮೇಲೆ ತೆಂಗಿನಕಾಯಿನ್ನು ಇಟ್ಟು ಒಂದು ಬದಿಯಲ್ಲಿ ಎಲೆ ಅಡಿಕೆ ಮತ್ತು 25 ಪೈಸೆ ಇಟ್ಟು ಇನ್ನೊಂದು ಬದಿಯಲ್ಲಿ ಬಾಳೆಹಣ್ಣು ಇಟ್ಟು ಎದುರಿನಲ್ಲಿ ಒಂದೆರಡು ಹೂವು ಇಟ್ಟು ಊದುಕಡ್ಡಿ ಹಚ್ಚಿಟ್ಟು ನಂದಾದೀಪ ಹಚ್ಚಿ ಇಟ್ಟ ನಂತರ) ಮನೆ ಯಜಮಾನರಲ್ಲಿ, ಊರು ಗೌಡರಲ್ಲಿ / ಮುಖ್ಯಸ್ಥರಲ್ಲಿ ಕೇಳಿ ಪೂರ್ವದ ಮನೆಯ ಮೆಟ್ಟಿಲಿನಿಂದ ಹಿಡಿದು ದಿಬ್ಬಣ ಬಂದು ನಿಲ್ಲುವ ಎದುರಿನ ಈ ಎಂಟು ಕಂಬಗಳ ಉದ್ದಕ್ಕೂ ಮೂರು ಮಡಿಯಾದ ಬಿಳಿ ಪಂಚೆಯನ್ನು ಚಪ್ಪರದ ಒಳ ಭಾಗದಲ್ಲಿ ಮೇಲೆ ಕಟ್ಟುವುದು. ಶಾಸ್ತ್ರದ ನಡುವಿನ ನಾಲ್ಕು ಕಂಬಗಳ ನಡುವಿನಲ್ಲಿ ಒಂದು ತೆಂಗಿನಕಾಯಿನ್ನು ಕಟ್ಟುವುದು. ಬಾಳೆಹಣ್ಣು, ಎಲೆ, ಅಡಿಕೆ ಸುತ್ತಲೂ ಕಟ್ಟುವುದು. ಮೂಲೆ ಮೂಲೆಗಳಿಗೆ ಮೊದಲು ಹೇಳಿದಂತೆ ಸೌತೆಕಾಯಿ, ಎಲೆ, ಅಡಿಕೆ, ಬೆಲೂನು, ಬಣ್ಣದ ಕಾಗದಗಳಿಂದ ಮಾಡಿದ ಕೃತಕ ಹೂಮಾಲೆಗಳನ್ನು ಕಟ್ಟಿ ಕಂಬಗಳಿಗೆ ಬಣ್ಣದ ಕಾಗದಗಳನ್ನು ಅಂಟಿಸಿ ಹನ್ನೆರಡು ಕಂಬಗಳುಳ್ಳ ಚಪ್ಪರವು ಎದ್ದು ಕಾಣುವಂತೆ ಅಲಂಕರಿಸುವುದು. ತೂಗು ದೀಪವನ್ನು ಹಾಲೆ ಕಂಬದ ಬದಿಯಲ್ಲಿ ಕಟ್ಟಿ ತೂಗುವುದು. ಮೇಲ್ಕಟ್ಟು ಕಟ್ಟುವ ಸಮಯದಲ್ಲಿ ಓಲಗದವರು ವಾದ್ಯ ಮಾಡುತ್ತಿರಬೇಕು. ಮೇಲ್ಕಟ್ಟು ಕಟ್ಟಿದ ನಂತರ ಈ ಚಪ್ಪರವನ್ನು 'ಸೀತಾವಳಿ ಚಪ್ಪರ'ವೆಂದು ಕರೆಯುವರು. ಅದುದರಿಂದ ಈ ಚಪ್ಪರದ ಶ್ರೇಷ್ಠತೆಯನ್ನು ಕಾಪಾಡಲು 'ಇದರ ಅಡಿಯನ್ನು ಹಿಡಿ ಸೂಡಿನಿಂದ

ಗುಡಿಸುವುದಾಗಲಿ, ಪಾದರಕ್ಷೆಯನ್ನು ಹಾಕುವುದಾಗಲಿ, ಅವರಡಿಯಲ್ಲಿ ಉಗುಳುವುದಾಗಲಿ, ಅಮಂಗಲ ವಾಕ್ಯ ಹೇಳುವುದಾಗಲಿ ನಿಷಿದ್ಧ' ಇದನ್ನು ಈಗಲೂ ಎಲ್ಲಾ ಕಡೆಗಳಲ್ಲಿ ಸರಿಯಾಗಿ ಪಾಲಿಸುತ್ತಾರೆ. ಮೊದಲು ಗಣಪತಿಗೆ ಇಟ್ಟ ಅಕ್ಕಿ, ತೆಂಗಿನಕಾಯಿ, ಬಾಳೆಹಣ್ಣು, ಹಣ, ಎಲೆ, ಅಡಿಕೆ ಮಡಿವಾಳನು ತೆಗೆದುಕೊಳ್ಳುವುದು.

**ಚಪ್ಪರದ ಊಟ :**

ಒಕ್ಕಲೆಜಮಾನರು ಊಟಕ್ಕೆ ತಯಾರಿ ಆದ ನಂತರ ಒಂದು ಚೆಂಬಿನಲ್ಲಿ ನೀರು ಹಿಡಿದು ಸರ್ವರನ್ನು ಊಟಕ್ಕೆ ಏಳಬೇಕು ಎಂದು ಆಹ್ವಾನಿಸುತ್ತಾರೆ. ವಧು ಹಾಗೂ ವರನು ಸಹ ಊಟ ಮಾಡಿಕೊಳ್ಳುವುದು.

**ಕಾಸ್ತಾಳಿ ಕಟ್ಟುವುದು :**

ಊಟ ಮುಗಿದ ನಂತರ ಸೋದರ ಮಾವನಿಗೆ ಕಾಸ್ತಾಳಿ ಕಟ್ಟುವುದಕ್ಕೆ ನೀರು ಕೊಡುವುದು. (ಇದಕ್ಕೆ ಕೆಲವು ಕಡೆ ಮುಹೂರ್ತ ಮಣಿ ಎಂದು ಹೇಳುವರು) ವರನು ಬಿಳಿ ಪಂಚೆಯನ್ನುಟ್ಟು ಮೇಲ್ಮೈಗೆ ಅಂಗಿ ಹಾಕದೆ ತಲೆಯ ಮೇಲೆ ವಸ್ತ್ರ ಹಾಕಿಕೊಂಡು ನೆಲ್ಲಕಿ ಅಡಿಯಲ್ಲಿ ನಿಲ್ಲಬೇಕು. ವಧುವೂ ಕೂಡ ಸಾಮಾನ್ಯ ಉಡುಪಿನಲ್ಲಿ ತಲೆಗೆ ವಸ್ತ್ರ ಹಾಕಿ ನೆಲ್ಲಕ್ಕಿ ಅಡಿಯಲ್ಲಿ ನಿಂತಿರಬೇಕು. ಆಗ ಊರು ಗೌಡನು / ಮುಖ್ಯಸ್ಥರು ಮೊತ್ತ ಮೊದಲಿಗೆ 'ಹತ್ತು ಕುಟುಂಬ ಹದಿನೆಂಟು ಗೋತ್ರ ಸಂಸಾರ ಸಂಗಡ ಕೇಳಿ ಕುಲಸ್ಥರ ಸಭೆಯಲ್ಲಿ ಸಮಸ್ತರ ಸಂಗಡ ಕೇಳಿ ಸೋದರ ಮಾವ ವರನಿಗೆ / ವಧುವಿಗೆ ಕಾಸ್ತಾಳಿ ಕಟ್ಟುವರು. ಆಗ ಸರ್ವರೂ ಒಳ್ಳೆಯ ಕಾರ್ಯವಂತೆಯೇ ಎಂದು ಹೇಳುವುದು. ವರ / ವಧುವು ಮೊದಲು ನೆಲ್ಲಕ್ಕಿ ದೀಪಕ್ಕೆ ಅಕ್ಕಿ ಹಾಕಿ ನಂತರ ಮನೆಯ ಅಟ್ಟಕ್ಕೆ ಅಕ್ಕಿ ಹಾಕಿ (ಅಟ್ಟದ ಮೇಲೆ ಮುಡಿಪು ಇರುವ ಕಾರಣ) ಸೋದರ ಮಾವನ, ತಂದೆ, ತಾಯಿಯ, ಊರು ಗೌಡರ / ಮುಖ್ಯಸ್ಥರ ಮತ್ತು ಹಿರಿಯ ಪಾದ ಮುಟ್ಟಿ ನಮಸ್ಕಾರ ಮಾಡಿ ಆಶೀರ್ವಾದ ಬೇಡುವುದು. ಕಾಸ್ತಾಳಿ ಕಟ್ಟುವುದಕ್ಕೆ ಮೊದಲೇ ವರನು / ವಧುವು ತನ್ನ ಸೋದರ ಬಾವ / ಅತ್ತಿಗೆ ಇವರಿಗೆ ವೀಳ್ಯ ಕೊಟ್ಟು ಅಡೋಳಿಯಾಗಿ ನಿಲ್ಲಲು ಕೇಳಿಕೊಳ್ಳುವುದು. ಅಕ್ಕ ಅಥವಾ ತಂಗಿಗೂ ಕೂಡ ಕಂಚಿಮಿಯಾಗಿ ನಿಲ್ಲಲು ವೀಳ್ಯ ಕೊಟ್ಟು ಕೇಳಿಕೊಳ್ಳವುದು. ಸೋದರ ಇಲ್ಲವೇ ಅಕ್ಕ ತಂಗಿಯರು ಇಲ್ಲದವರು ಹತ್ತಿರ ಸಂಬಂಧಕರನ್ನು ಕೇಳಿಕೊಳ್ಳುವುದು. ನಂತರ ವರನ / ವಧುವಿನ ಎಲ್ಲಾ ವಿಚಾರಗಳಲ್ಲಿ ಅವರಿಬ್ಬರೂ ಎಚ್ಚರ ವಹಿಸುವುದಾಗಿದೆ.

**ಎಣ್ಣೆ ಅರಶಿಣ ಮಾಡುವುದು :**

ಇದು ವರನೇ ಆಗಲಿ, ವಧುವೇ ಆಗಲಿ ಕಾಸ್ತಾಳಿ / ಮುಹೂರ್ತ ಮಣಿ ಕಟ್ಟಿದ ನಂತರ ನೆಲ್ಲಕ್ಕಿ ಅಡಿಯಲ್ಲಿ ಎರಡು ಮಣೆಗಳನ್ನು ಇಟ್ಟು ಒಂದು ಮಣೆಯಲ್ಲಿ ವರ / ವಧುವನ್ನು ಕುಳ್ಳಿರಿಸಿ ಎದುರಿನ ಮಣೆಯಲ್ಲಿ ಒಂದು ಕಂಚಿನ ಬಟ್ಟಲಲ್ಲಿ ತೆಂಗಿನೆಣ್ಣೆ, ಅರಶಿಣ ಮಿಶ್ರ ಮಾಡಿದ ಮಿಶ್ರಣವನ್ನು ಗರಿಕೆ ಹುಲ್ಲಿನ ಕುಡಿಯೊಂದಿಗೆ 5 ಎಲೆ ಒಂದು ಅಡಿಕೆಯನ್ನು ಇಟ್ಟಿರುವರು ಈಗ 5 / 7 / 9 ಮುತ್ತೈದೆಯರು ಜ್ಯೋತಿಗೆ ಅಕ್ಕಿ ಹಾಕಿ ಮೊದಲು ಎಲೆ ಅಡಿಕೆಯೆನ್ನೆತ್ತಿ ವರ / ವಧುವಿನ ಕೈಲ್ಲಿ ಕೊಟ್ಟು ಎಣ್ಣೆ ಅರಶಿಣದ ಮಿಶ್ರಣವನ್ನು ಗರಿಕೆ ಹುಲ್ಲಿನಿಂದ ಶೋಭಾನೆ ಹೇಳುತ್ತಾ ಮೈಗೆ ಲೇಪಿಸಿ ಉಜ್ಜುವರು. ಹೀಗೆ ಒಬ್ಬರು ಎಣ್ಣೆ ಅರಶಿಣದ ಶಾಸ್ತ್ರ ಮಾಡಿದ ನಂತರ ಕೈಯಲ್ಲಿ ಕೊಟ್ಟ ಎಲೆ ಅಡಿಕೆಯನ್ನು ಪುನಃ ಪಡೆದು ಕಂಚಿನ ತಟ್ಟೆಯಲ್ಲಿ ಇಡುವರು. ಹೀಗೆ ಒಬ್ಬರಾದ ನಂತರ ಒಬ್ಬರು 5 / 7/ 9ರ ಸಂಖ್ಯೆಯಲ್ಲಿ ಎಣ್ಣೆ ಅರಶಿಣ ಮಾಡಿ ಪುನಃ ಮೇಲ್ಕಟ್ಟಿನಡಿಯಲ್ಲಿಯೂ ಎಣ್ಣೆ ಅರಶಿಣ ಮಾಡುವ ಶಾಸ್ತ್ರವನ್ನು ಕೆಲವು ಕಡೆ ಮಾಡುವರು. ಎಣ್ಣೆ ಅರಶಿಣ ಮಾಡುವಾಗ ಊರ ಅಕ್ಕಂದಿರಿಗೆ, ಊರು ಗೌಡರು / ಮುಖ್ಯಸ್ಥರು ಶೋಭಾನೆ ವೀಳ್ಯವೆಂದು ಕೊಡುವರು. ಎಣ್ಣೆ ಅರಶಿಣ ಮಾಡುವುದಕ್ಕೆ ವರನನ್ನು / ವಧುವನ್ನು ಕೂರಿಸವಾಗಲೂ ಮತ್ತು ಏಳಿಸುವಾಗಲೂ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳುವುದು.

**ಮುಖ ಕ್ಷೌರ ಮಾಡುವುದು:**

ಈ ಹಿಂದೆ ಹೇಳಿದಂತೆ ವೀಳ್ಯ ಶಾಸ್ತ್ರದ ನಂತರ ಹುಡುಗನು ಮುಖ ಕ್ಷೌರ ಮಾಡಿರುವುದಿಲ್ಲ. ಮಾಡಬಾರದು ಎಂದು ಹಿಂದಿನಿಂದ ನಡೆದು ಬಂದಿರುವುದು. ಮೇಲ್ಕಟ್ಟಿನಡಿಯಲ್ಲಿ ಮದುವಣ್ಣನನ್ನು ಕುಳ್ಳಿರಿಸಿ ಕ್ಷೌರಿಕನ ಮರ್ಯಾದೆಯನ್ನು ಕೊಟ್ಟು ಮುಖ ಕ್ಷೌರವನ್ನು ಮಾಡುವುದಕ್ಕೆ ಹೇಳಬೇಕು. ಕ್ಷೌರಿಕನು ಮುಖ ಕ್ಷೌರ ಮಾಡಿದ ನಂತರ ಅಡೋಲಿ ನಿಂತಿರುವ ಬಾವ ಮೈದುನವರು ಮತ್ತು ಸ್ನೇಹಿತರು ಮದುವಣ್ಣನನ್ನು ಸ್ನಾನ ಮಾಡಿಸುವುದಕ್ಕೆ ಕರೆದುಕೊಂಡು ಹೋಗುವರು. ಎಣ್ಣೆ, ಅರಶಿಣ ಉಜ್ಜಿದ ಎಣ್ಣೆ ಜಿಡ್ಡನ್ನು ಬಾಳೆಹಣ್ಣು, ಸೀಗೆಕಾಯಿ ಪುಡಿ, ಸೋಪು ಉಪಯೋಗಿಸಿ ಸರಿಯಾಗಿ ಉಜ್ಜಿ ಬಿಸಿ ನೀರಿನಿಂದ ಸ್ನಾನ ಮಾಡಿಸುವರು. ಚೆನ್ನಾಗಿ ಸ್ನಾನವಾದ ನಂತರ ತಲೆಗೆ ಎಣ್ಣೆ ಹಾಕಿ ತಲೆ ಬಾಚಿ ಜೋಡಿ ಪಂಚೆಯನ್ನು ಕಚ್ಚೆ ಹಾಕಿ ಉಡಿಸಿ, ಬಿಳಿ ಶರಟು

(ಅಂಗಿ) ಮೇಲೆ ಬಿಳಿ ಕೋಟು, ಅಡ್ಡ ಶಾಲು, ತಲೆಗೆ ಪೇಟ (ರುಮಾಲು) ಸುತ್ತಿ ಪೇಟದ ಮೇಲೆ ಮುಸುಕಿನ ವಸ್ತ್ರ, ಕೈಗೆ ಉಂಗುರ, ಕತ್ತಿಗೆಗೆ ಚಿನ್ನದ ಸರ, ಕೈಗೆ ಕಡಗ (ಗಟ್ಟಿ ಬಳೆ)ವನ್ನು ಹಾಕುವರು. ಹೆಣ್ಣಿಗಾದರೆ ಅವಳಿಗೆ ಬೇಕಾದ ಶೃಂಗಾರ ಸಾಧನಗಳನ್ನು ಉಪಯೋಗಿಸುವರು, ಅಡೋಳಿಯು ಕೂಡಾ ಬಿಳಿ ಕೋಟು, ಬಿಳಿ ಅಂಗಿ, ಪೇಟ ಹಾಕಿ ವರನಿಗೆ / ವಧುವಿಗೆ ಬಿಳಿ ಕೊಡೆಯನ್ನು ಹಿಡಿದಿರಬೇಕು. ಇಲ್ಲಿ ಕೆಲವು ಕಡೆ ಮದುವಣ್ಣನ ಪೇಟದ ಸುತ್ತಿಗೆ 'ಪಟ್ಟ ಬಾಸಿಂಗ'ವೆಂಬ ಒಂದು ಆಭರಣ ಸಾಧನವನ್ನು ಸುತ್ತಿ ಕಟ್ಟುವರು. ಸುಗಂಧ ಎಣ್ಣೆಗಳನ್ನು ಉಪಯೋಗಿಸುವರು. ಅಲ್ಲಿಂದ ಬಿಳಿ ಕೊಡೆಯನ್ನು ಅಡೋಳಿ ಹಿಡಿದು ವಾದ್ಯಗೋಷ್ಠಿಯೊಂದಿಗೆ ಹೊರಡುವರು. ಚಪ್ಪರದ ಮೇಲ್ಕಟ್ಟಡಿಗೆ ಬರುವುದಕ್ಕೆ ಮೊದಲು ಗಂಗೆ ಪೂಜೆ ಮಾಡಿ ಬರಬೇಕು.

ಗಂಗೆ ಪೂಜೆ :

ಸ್ನಾನದ ನಂತರ ಹೊರಡುವ ವರನ / ವಧುವಿನ ಸಮೂಹ ಒಂದು ಫಲ ವೃಕ್ಷದಡಿಗೆ ಬಂದು ಅಲ್ಲಿ ಗಂಗೆ ಪೂಜೆಯನ್ನು ನೆರವೇರಿಸಿ ಬರುವುದು. ಮರದ ಅಡಿಯಲ್ಲಿ ಮಡಿವಾಳನು ಚಾಪೆ ಹಾಕಿ ಅದರ ಮೇಲೆ ಒಂದು ಮಡಿಯನ್ನು ಹಾಕಬೇಕು. ಅದರ ಮೇಲೆ 5 ಕುಡಿ ಬಾಳೆ ಎಲೆಯನ್ನು ಇಟ್ಟು ಮೊದಲು ಗಣಪತಿಗೆ ಇಟ್ಟು ನಂತರ ನೆನೆ ಹಾಕಿದ ಹಸಿ ಅಕ್ಕಿ, ಎಳ್ಳು, ಕಡಲೆ, ಬೆಲ್ಲ, ತೆಂಗಿನಕಾಯಿ ತುರಿ ಹಾಕಿ ಕಲಸಿದ ಪಂಚ ಕಜ್ಜಾಯವನ್ನು ಎಲ್ಲಾ ಎಲೆಗಳಿಗೂ ಬಳಸುವುದು. (ಇದು ವಧುವಾದರೆ ಅವಳೇ ಬಳಸುವುದು. ವರನಾದರೆ ಅವನ ಅಕ್ಕ ತಂಗಿಯಂದಿರು ಮಾಡುತ್ತಾರೆ) ಎಲೆಗಳಿಗೆ ನೆಣೆ ಹತ್ತಿಸಿ ಊದುಕಡ್ಡಿ ಹಚ್ಚಿ ಇಟ್ಟು ತೆಂಗಿನಕಾಯಿ ಒಡೆದು (ಗಣಪತಿಗೆ ಇಟ್ಟ ತೆಂಗಿನಕಾಯಿ ತೆಗೆಯಕೂಡದು) ಬಾಳೆಹಣ್ಣಿನ ತುದಿ ಭಾಗ ಸುಲಿದು ಇಟ್ಟು ಗಂಧ ದೂಪ ಹೊಗೆ ಕೊಡುವುದು. ನಂತರ ವರ / ವಧುವು ಮರದ ಸುತ್ತು ಹಾಕಿ ಅಗಲಿಗೆ ಮೂರು ಸುತ್ತು ಬಂದು ಒಂದು ಎಲೆಯನ್ನು ತೆಗೆದು ಅಲ್ಲಿಯೇ ನಿಂತಿರುವ ಗಂಡು ಮಗುವಿಗೆ ಮೊದಲು ಮತ್ತು ಹೆಣ್ಣು ಮಗುವಿಗೆ ಇನ್ನೊಂದು ಎಲೆಯನ್ನು ಕೊಟ್ಟು ಒಂದು ಎಲೆಯನ್ನು ಹರಿಯುವ ನೀರಿಗೂ ಬಿಡುವುದು. ಎಲೆಗೆ ಬಳಸಿ ಉಳಿದ ಪಂಚ ಕಜ್ಜಾಯವನ್ನು ಉಳಿದ ಎಲ್ಲರಿಗೂ ಪ್ರಸಾದವಾಗಿ ಕೊಡುವುದು. ಅಲ್ಲಿಂದ ವಾದ್ಯದೊಂದಿಗೆ ಚಪ್ಪರದ ಮುಂಭಾಗದಲ್ಲಿ ಬಂದು ನಿಲ್ಲುವುದು.

**ಆರತಿ ಮಾಡುವುದು ಮತ್ತು ದೃಷ್ಟಿ ತೆಗೆಯುವುದು:**

ಚಪ್ಪರ ಮುಂಭಾಗಕ್ಕೆ ಬಂದಾಗ ಮುತ್ತೈದೆಯರು 5 / 7 / 9ರಂತೆ ಆರತಿ ಮಾಡುವರು. ಇಲ್ಲಿ ಮದುವಣ್ಣನ / ಮದುಮಗಳ ಕಾಲು ತೊಳೆಯುವ ಕ್ರಮವಿದೆ. ಮದುವಣ್ಣ / ಮದುಮಗಳ ಅಕ್ಕನ ಮಕ್ಕಳು ಇಲ್ಲವೆ ಹತ್ತಿರದ ಸಂಬಂಧಿಕರ ಸಣ್ಣ ಮಕ್ಕಳು ಮದುವಣ್ಣನ ಕಾಲು ತೊಳೆಯುವರು. ಕಾಲು ತೊಳೆದ ಮಗುವಿನ ಚೆಂಬಿಗೆ ಅಡೋಳಿಯು ಒಂದು ಹಣ ಹಾಕುವರು. ಆರತಿ ಎತ್ತಿ ಹಿಂತಿರುಗುವಾಗ ಆರತಿ ತಟ್ಟೆಗೂ ವಧೂ ಯಾ ವರನ ಕಡೆಯವರು ಎಲೆ ಅಡಿಕೆ ಹಾಕುವರು. ಆರತಿ ಆದ ಕೂಡಲೇ ಊರು ಗೌಡರು / ಮುಖ್ಯಸ್ಥರು 4 ಎಲೆ 4 ಅಡಿಕೆ ಹಿಡಿದು ವರ / ವಧುವಿನ ತಲೆಗೆ ಸುತ್ತ ತಂದು 4 ಎಲೆ 4 ಅಡಿಕೆಯನ್ನು 4 ದಿಕ್ಕುಗಳಿಗೆ ಎಸೆದು ಒಂದು ತೆಂಗಿನಕಾಯಿಯನ್ನು ತಲೆಗೆ ಮೂರು ಸುತ್ತು ತಂದು ಕಲ್ಲಿಗೆ ಹೊಡೆದು ಚೂರು ಮಾಡುತ್ತಾರೆ. (ಇದು ಮದುಮಕ್ಕಳ ದೃಷ್ಟಿ ತೆಗೆಯುವ ಕ್ರಮ.)

**ಹಸೆ ಬರೆಯವುದು :**

ಸ್ನಾನ ಮಾಡುತ್ತಿರುವ ಸಮಯದಲ್ಲಿ ನೆರೆದ ಸಭಿಕರಿಗೆ ಊರು ಗೌಡರು / ಮುಖ್ಯಸ್ಥರು ನೀರು ಕೊಟ್ಟು ಹಸೆ ಬರೆಯುವುದಕ್ಕೆ ಕೇಳಿಕೊಳ್ಳುತ್ತಾರೆ. ನೆಲ್ಲಕ್ಕಿ ಅಡಿಯಲ್ಲಿ ಹುಡುಗನ ಹಸೆ ಬಲ ಭಾಗದಲ್ಲಿ ಬರುವಂತೆಯೂ, ಹುಡುಗಿಯ ಹಸೆಯು ಎಡ ಭಾಗದಲ್ಲಿ ಬರುವಂತೆಯೂ ಹುಡುಗನ ಹಸೆಗೆ ಸೂರ್ಯ ಗುರುತು ಹಾಕಿ ಸ್ವಲ್ಪ ದೊಡ್ಡದಾಗಿಯೂ, ಚಂದ್ರನ ಗುರುತು ಹಾಕಿ ಸ್ವಲ್ಪ ಚಿಕ್ಕದಾಗಿ ಹುಡುಗಿಯ ಹಸೆಯನ್ನು ಬರೆಯುವರು. ಹಸೆಗೆ ಹುಡುಗಿಯ ಮತ್ತು ಹುಡುಗನ ಹೆಸರು ಬರೆಯಬೇಕು. ಹಸೆ ಬರೆಯುವುದಕ್ಕೆ ಕಪ್ಪು ಗೋಡೆಯಾದರೆ ಬಿಳಿ ಚೋಕನ್ನು, ಬಿಳಿ ಗೋಡೆಯಾದರೆ ಬಣ್ಣದ ಚೋಕನ್ನು ಉಪಯೋಗಿಸುತ್ತಾರೆ. ಹಸೆ ಬರೆದ ನಂತರ ಹಸೆ ಬರೆದವರಿಗೆ ಊರು ಗೌಡರು ಒಂದು ಪಚ್ಚೆಯಲ್ಲಿ ಹುದುರಿ, ಬಾಳೆಹಣ್ಣು, ಅವಲಕ್ಕಿ, ಕಾಫಿಯನ್ನು ಫಲಹಾರಕ್ಕಾಗಿ ಕೊಡುವರು. ಅವರು ಅಲ್ಲಿಂದ ಸ್ಥಳ ಬಿಟ್ಟ ಕೂಡಲೇ ಊರ ಅಕ್ಕಂದಿರು 3 ಅಥವಾ 5 ಜನರು ಬಂದು ಶೋಭಾನೆ ಹಾಡು ಹೇಳಿ ಪ್ರತಿ ಹಸೆಗೂ 5 ಕುಡ್ತೆ ಅಕ್ಕಿ, 5 ಎಲೆ ಅಡಿಕೆಯಂತೆ ಇಟ್ಟು ಒಲಿ ಚಾಪೆ ಹಿಡಿದು, ಎಲ್ಲರಲ್ಲೂ ಕೇಳುತ್ತಾ ಹಸೆ ಚಾಪೆ ಹಾಕುವರು. ಅವರಿಗೂ ಊರು ಗೌಡರು ಲಘು ಉಪಹಾರವನ್ನು ಕೊಡುವರು.

ಕೂಡಲೇ ಒಂದು ಕಂಚಿನ ಬಟ್ಟಲಿನಲ್ಲಿ ಕಂಚುಮಿಯನ್ನು ತಯಾರು ಮಾಡುವುದು. ಒಂದು ಕಂಚಿನ ಬಟ್ಟಲಿಗೆ 6 ಕುಡ್ತೆ ಅಕ್ಕಿ ಹಾಕಿ, ಒಂದು ಕಂಚಿನ ಗಿಂಡಿಗೆ ಹಸುವಿನ ಹಾಲು ಹಾಕಿ ಅದರ ಒಳ ಬದಿಯ ಸುತ್ತಲೂ 5 ಮಾವಿನ ಎಲೆಯನ್ನು ಇಟ್ಟು ಅದರ ಮಧ್ಯದಲ್ಲಿ ಕಂಚಿನ ಗಿಂಡಿಯ ಬಾಯಿಯಲ್ಲಿ ಸರಿಯಾಗಿ ಕುಳಿತುಕೊಳ್ಳುವಂತೆ ಒಂದು ತೆಂಗಿನಕಾಯಿಯನ್ನು ಇಟ್ಟು ಗಿಂಡಿಯನ್ನು ಎದುರು ಭಾಗದಲ್ಲಿ ಕಂಚಿಗೆ ಹಣತೆ ದೀಪ ಇಟ್ಟು ಸುತ್ತು ಕುಂಕುಮದ ಕರಡಿಗೆ, ಸಣ್ಣ ಕನ್ನಡಿ, ಮರದ ಬಾಚಣಿಗೆ, ವಿಭೂತಿ ಉಂಡೆ ಮತ್ತು ಗಿಂಡಿಯ ಕಂಠಕ್ಕೆ ಕರಿಮಣಿಯನ್ನು ಸುತ್ತಿ ದೀಪಗಳನ್ನು ಪಕ್ಕ ನೆಲ್ಲಕ್ಕಿ ಅಡಿಯಲ್ಲಿ ಇಡುವುದು. ಅಷ್ಟರಲ್ಲಿ ವರ / ವಧುವು ಅವಶಿಯನ್ನು ಮುಗಿಸಿಕೊಂಡು ಹಸೆ ಬರೆದ ನೆಲ್ಲಕ್ಕಿ ಅಡಿಗೆ ಬರುವುದು.

**ಹರಿಕೆ ಹಣ ಕಟ್ಟುವುದು:**

ಗಂಗೆ ಪೂಜೆಯನ್ನು ಮುಗಿಸಿ ನೆಲ್ಲಕ್ಕಿ ಅಡಿಗೆ ಬಂದ ನಂತರ ಕುಲದೇವರಿಗೆ ಹರಕೆ ಹಣ ಕಟ್ಟುವುದು. ವರ / ವಧುವನ್ನು ಹಸೆಯ ಎದುರಿನಲ್ಲಿ ನಿಲ್ಲಿಸಿ, ಊರು ಗೌಡರು / ಮುಖ್ಯಸ್ಥರು, ಕುಟುಂಬಸ್ಥರು, ನೆಂಟರಿಷ್ಟರನ್ನು ಹರಿಕೆ ಹಣ ಕಟ್ಟುವುದಕ್ಕೆ ಆಮಂತ್ರಿಸಿ, ಒಂದು ಸಣ್ಣ ಪೆಟ್ಟಿಯಲ್ಲಿ ಹುದರಿ, ಬಾಳೆಹಣ್ಣು, ಅವಲಕ್ಕಿ, ಬೆಲ್ಲ, ತೆಂಗಿನಕಾಯಿ, 2 ಓಟೆ ಗುತ್ತಿ, 2 ಕೋಲು, ಮಾವಿನ ಎಲೆ, ಒಳ್ಳೆಮೆಣಸು, 25 ಪೈಸೆಯ ಒಂದು ನಾಣ್ಯ ಶೇಖರಿಸಿಟ್ಟುಕೊಂಡು 'ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ಥರ ಸಭೆಯಲ್ಲಿ ನೆಲ್ಲಕ್ಕಿ ಅಡಿಯಲ್ಲಿ ಕುಲದೇವರಿಗೆ ಹರಿಕೆ ಹಣ ಕಟ್ಟುವಂತವೇ ಎಂದು ಮೂರು ಬಾರಿ ಕೂಗಿ ಹೇಳಿ ವರವ / ವಧುವಿನ ಕೈಯಿಂದ ಒಂದು ಓಟೆ ಗುತ್ತಿಗೆ 25 ಪೈಸೆ ನಾಣ್ಯವನ್ನು, ಇನ್ನೊಂದಕ್ಕೆ ಒಳ್ಳೆಮೆಣಸನ್ನು ತುಂಬಿ ಅದಕ್ಕೆ ಮಾವಿನ ಎಲೆಯಿಂದ ಮುಚ್ಚಿ ಕೋಲಿನಿಂದ ಜಡಿದು ತೆಂಗಿನಕಾಯಿಯನ್ನು ಒಡೆದು ನೀರು ಹಾಕಿ ಶುದ್ಧ ಮಾಡಿ ತೆಂಗಿನ ಒಡೆಗಳನ್ನು ಅಂಗಾತ ಇಟ್ಟು ಬಾಳೆಹಣ್ಣು ಗಂಧದ ದೂಪ ಕೊಟ್ಟು ಹರಕೆ ಹಣ ಕಟ್ಟಿದ ಓಟೆ ಗುತ್ತಿಗೆಯನ್ನು ಮನೆ ಯಜಮಾನರಲ್ಲಿ ಕೊಡವರು. ಅವರು ಅದನ್ನು ಅಟ್ಟದಲ್ಲಿ ಮುಡಿಪು ಕಟ್ಟಿರುವ ಸ್ಥಳದಲ್ಲಿ ಇಟ್ಟು ಬರುವವರು. ನಂತರ ವರನನ್ನು / ವಧುವನ್ನು ಹಸೆ ಚಾಪೆಯಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ಕೂರಿಸುತ್ತಾರೆ. ಎದುರಿನಲ್ಲಿ ಒಂದು ಮಣೆಯ ಮೇಲೆ ಕಂಚುಮಿಯನ್ನು ಇಡುವರು.

**ಹಾಲು ತುಪ್ಪ ಶಾಸ್ತ್ರ :**

ಒಂದು ಕಂಚಿನ ಬಟ್ಟಲಿನಲ್ಲಿ ಹಾಲು ಹಾಕಿ ಅದಕ್ಕೆ ಒಂದೆರಡು ಚಮಚ ತುಪ್ಪ ಹಾಕಿ ಎದುರಿನಲ್ಲಿ ಒಂದು ಮಣೆಯ ಮೇಲೆ ಬಟ್ಟಲನ್ನು ಇಟ್ಟು ಒಂದು ಚೆಂಬು ನೀರನ್ನು ಇಟ್ಟು ವರನ / ವಧುವಿನ ಬಲಕೈಯನ್ನು ಮೊದಲು ನೀರಿಗೆ ಮುಳುಗಿಸಿ ನಂತರ ಹಾಲಿನ ಬಟ್ಟಲಿಗೆ ಮುಳುಗಿಸಿ ಹೀಗೆ ಮೂರು ಬಾರಿ 3/5 ಮುತ್ತೈದೆಯವರು ಶಾಸ್ತ್ರ ಮಾಡಿದ ನಂತರ ಮುಕ್ತಾಯವಾಗುತ್ತದೆ.

**ಬಳೆ ತೊಡಿಸುವ ಕ್ರಮ :**

ಮುಹೂರ್ತದ ಮೊದಲ ದಿನ ಅಂದರೆ ಚಪ್ಪರದ ದಿನ ಹೆಣ್ಣಿನ ಸ್ನಾನ, ಗಂಗೆ ಪೂಜೆ ಕಳೆದ ನಂತರ ಮದುರಂಗಿ ಶಾಸ್ತ್ರಕ್ಕೆ ಮುಂಚಿತವಾಗಿ ಬಳೆ ತೊಡಿಸುವ ಕ್ರಮವಿದೆ. ಇದು ಕೂಡಾ ಒಂದು ಶಾಸ್ತ್ರವೇ. ಬಳೆಗಾರ್ತಿ ಚಪ್ಪರದ ಅಡಿಯಲ್ಲಿ (ಬಳೆಗಾರ್ತಿಯನ್ನು ಮೊದಲೇ ಆಮಂತ್ರಿಸಿರಬೇಕು) ಹಸಿರು ಮತ್ತು ಕೆಂಪು ಬಳೆಗಳನ್ನು ಮದುವಳ್ತಿಗೆಯ ಕೈಗೆ ತೊಡಿಸುವರು. ಅಲ್ಲದೆ ಅಲ್ಲಿ ಸೇರಿದ ಎಲ್ಲಾ ಇಷ್ಟಪಟ್ಟ ಹೆಣ್ಣು ಮಕ್ಕಳ ಕೈಗೂ ಬಳೆ ತೊಡಿಸುವರು. ಮುಂದೆ ಮದುರಂಗಿ ಶಾಸ್ತ್ರ ನಡೆಯುತ್ತದೆ (ಕನ್ಯೆಯ ಮನೆಯಲ್ಲಿ ಮಾತ್ರ)

**ಮದುರಂಗಿ ಶಾಸ್ತ್ರ**

ಮದುರಂಗಿ ಮರದ ಎಲೆಯೊಂದಿಗೆ ಎಲೆ, ಅಡಿಕೆ ಬೆರಸಿ ಚೆನ್ನಾಗಿ ಅರೆದು ಬೇಕಾದ ಬಣ್ಣ ಬರುವಂತೆ ಮಾಡಿ ಕೈಗಳನ್ನು ಅಲಂಕರಿಸುವುದಕ್ಕಾಗಿ ಮಾಡುವುದು. ಆದರೆ ಇದು ಮದುವೆಯಾಗುವುದಕ್ಕೆ ಮುನ್ನ ಗಂಡು ತನ್ನ ಬಲಗೈಗೂ, ಹೆಣ್ಣು ತನ್ನ ಎಡಗೈಗೂ ಮದುರಂಗಿ ಇಡುವಂತಿಲ್ಲ ಎಂದು ಹಿರಿಯ ಕಾಲದಿಂದಲೇ ನಡೆದು ಬಂದಿರುವುದು. ಮದುರಂಗಿ ಇಡುವಾಗ ವರನ / ವಧುವಿನ ಉಡುಪಿಗೆ ತಗಲದಂತೆ ಇಟ್ಟು ಅದು ಹಿಡಿಯುವವರೆಗೆ ಬಟ್ಟೆ ಸುತ್ತಿ ಕಟ್ಟುವುದು. ಇದು ಮದುಮಗಳ ಬಟ್ಟೆ ಬರೆ ಕೆಡದೆ ಹಾಳಾಗದಿರಲಿ ಎಂದು ಒಂದಾದರೆ, ಇನ್ನೊಂದು, ಒಂದು ಕೈಗೆ ಮದುರಂಗಿಯನ್ನು ನಾಜೂಕಾಗಿ ಇಟ್ಟಲ್ಲಿ ಅದುವೇ ಇನ್ನೊಂದು ಕೈಗೂ ಹಿಡಿಸುವುದಕ್ಕೆ ಸುಲಭ ಉಪಯವಾಗಿದೆ

**ಅಕ್ಕಿ ಮುಹೂರ್ತ (ಶೇಷೋಪಚಾರ) :**

ಶಾಸ್ತ್ರಗಳೆಲ್ಲವೂ ಹೆಚ್ಚಿನ ಭಾಗ ರಾತ್ರಿಯೇ ಕಳೆದಿರುತ್ತದೆ. ವರ / ವಧುವಿನ ಮನೆಯಲ್ಲಿ ಒಬ್ಬೊಬ್ಬರಾಗಿಯೇ ಅಕ್ಕಿ ಮುಹೂರ್ತವನ್ನು ಮಾಡುವಂತಿದ್ದರೆ, ಮರುದಿನ ಬೆಳಗ್ಗೆ ಎಲ್ಲರ ಉಪಹಾರದ ನಂತರ ನಿಶ್ಚಯಿಸಿದ ಸಮಯಕ್ಕೆ ಸರಿಯಾಗಿ ವರ / ವಧುವನ್ನು ನೆಲ್ಲಕ್ಕಿ ದೀಪ ಹಚ್ಚಿ, ಅಲ್ಲಿ ಅಕ್ಕಿ ಹಾಕಿ ಮೇಲ್ಕಟ್ಟಡಿಗೆ ಊರು ಗೌಡರು / ಮುಖ್ಯಸ್ಥರು ಕರೆ ತಂದು ಮುಹೂರ್ತಕ್ಕೆ ಕೂರಿಸುವರು. ಅಲ್ಲಿ ಸಭೆಯ ಸರ್ವರೂ, ನೆಂಟರೂ, ಕುಟುಂಬದವರು, ಊರಿನವರು, ತಲೆಗೆ ಅಕ್ಕಿ ಹಾಕಿ ತಾವು ತಂದ ಉಡುಗೊರೆಯನ್ನು ಕೊಟ್ಟು ಆಶೀರ್ವಾದ ಮಾಡುವುದು. 'ಆಯುರಾರೋಗ್ಯ ಸುಖ ಸಂಪನ್ನರಾಗಿ ಬಾಳಿರಿ' ಎಂದು ಮನಸ್ಪೂರ ಆಶೀರ್ವದಿಸಿ ಅಕ್ಕಿ ಹಾಕುವರು. ಒಬ್ಬರೇ ಆಗಿ ಹೆಚ್ಚಿನ ಭಾಗ ಮನೆಯಲ್ಲಿಯೇ ಮದುವೆ ತೆಗೆಯುವರು. ಕನ್ಯೆಯ ಮನೆಯಲ್ಲಿ ಮಾತ್ರ ಹೆಚ್ಚಿಗೆ ನಡೆಸುತ್ತಾರೆ. ಹುಡುಗನ ಮನೆಯಲ್ಲಿ ಮದುರಂಗಿ ಶಾಸ್ತ್ರದ ನಂತರ ಬಣ್ಣ ಬಂಗಾರದ ಪೆಟ್ಟಿಗೆ ತುಂಬಿಸಿ ದಿಬ್ಬಣ ಹೊರಟು ಹೆಣ್ಣು ಕರೆ ತಂದು ದಂಪತಿ ಮುಹೂರ್ತವನ್ನು ನಡೆಸುವರು.

ಬಣ್ಣ ಬಂಗಾರದ ಪೆಟ್ಟಿಗೆ ತುಂಬಿಸುವುದು:

ಸೀತಾವಳಿ ಚಪ್ಪರದ ಕೆಳಗೆ ಮೇಲ್ಕಟ್ಟಿನಡಿಯಲ್ಲಿ ಕುಳಿತು ಪೆಟ್ಟಿಗೆಗೆ ಹೆಣ್ಣು ಕರೆ ತರಲು ಬೇಕಾದ ಎಲ್ಲಾ ವಸ್ತುಗಳನ್ನು ಅದರಲ್ಲಿ ತುಂಬಿಸುವುದು. ಈ ಪೆಟ್ಟಿಗೆಯಲ್ಲಿ ಧಾರೆ ಸೀರೆ, ಧಾರೆ ರವಕೆ, ಲಂಗ, ಮುಸುಕಿನ ವಸ್ತ್ರ, ಕರವಸ್ತ್ರ, ರಿಬ್ಬನ್, ಮಾತಿನ ಸೀರೆ, ಮಾತಿನ ರವಕೆ, ಲಂಗ, ಕಾಲುಚೈನು, ಕಾಲುಂಗುರ, ಚಿನ್ನದ ಓಲೆ, ಮೂಗು ಬೊಟ್ಟು, ಡಾಬು (ಕಾಸ್ತಾಳಿ / ಮುಹೂರ್ತ ಮಣಿಯ ಅವಶ್ಯವಿದ್ದಲ್ಲಿ ಅದೂ ಕೂಡ) ಒಂದು ಹಿಂಗಾರ, ವೀಳ್ಯ ಶಾಸ್ತ್ರದಲ್ಲಿ ಬರೆದ ಲಗ್ನ ಪತ್ರಿಕೆ, ಹಿಂಗಾರ ಒಡೆಯುವುದಕ್ಕೆ ಒಂದು ಚಿಕ್ಕ ಚಾಕು, ತೆರವಿನ ಹಣ 10–25 ಪೈಸೆ / 6–25 ಪೈಸೆ ಮತ್ತು ಹೆಣ್ಣಿನ ಶೃಂಗಾರಕ್ಕಾಗಿ ಶೃಂಗಾರ ಸಾಧನಗಳು. ಹೆಣ್ಣಿನ ಮನೆ ಬಹಳಷ್ಟು ದೂರದಲ್ಲಿದ್ದರೆ ಕೆಲವೊಮ್ಮೆ ಹೆಣ್ಣೊಳಿಸಿ ಕೊಟ್ಟ ಕೂಡಲೇ ತುಪ್ಪ ಮಗುಚುವ ಶಾಸ್ತ್ರ ಮಾಡಿ ಮುಗಿಸಿ ಬರುವರು. ಹಾಗೇನಾದರೂ ತುಪ್ಪ ಮಗುಚುವದಿದ್ದರೆ ಒಂದು ಚೆಂಬಿನಲ್ಲಿ ಒಂದು ಸೇರು ಹಸುವಿನ ತುಪ್ಪ ತುಂಬಿ ಅದಕ್ಕೆ ಬಾಳೆ ಎಲೆಯ ಕತ್ತರಿ

ಇಟ್ಟು ಎಲೆ ಕವುಚಿ ಕಟ್ಟುವುದು. ಹಗ್ಗ ಕಟ್ಟುವಾಗ ಗಂಟು ಬೀಳದಂತೆ ಎಚ್ಚರ ವಹಿಸುವುದು. ಜೋಡಿ ತೆಂಗಿನಕಾಯಿಯನ್ನು ಹಿಡಿದುಕೊಳ್ಳುವುದು. ಇನ್ನೊಂದು ಚೀಲ ಇಲ್ಲವೇ ಪೆಟ್ಟಿಗೆಯಲ್ಲಿ ಅಗತ್ಯವಿದ್ದಷ್ಟು ವೀಳ್ಯದೆಲೆ, ಇಡಿ ಅಡಿಕೆ, ಹೋಳಡಿಕೆ, ಎರಡು ಹರಿವಾಣ, ಒಂದು ಚೆಂಬು, ದೀಪಕ್ಕೆ ತೆಂಗಿನೆಣ್ಣೆ ಮತ್ತು ಜಮುಖ ಮುಂತಾದವುಗಳನ್ನು ಹಿಡಿದುಕೊಳ್ಳುವುದು. ಮಡಿಲಕ್ಕಿ ಕಟ್ಟುವುದಕ್ಕಾಗಿ ಒಂದು ಚೆಕ್ಕಿನ ಚೌಕ, 2 ಸೇರು ಅಕ್ಕಿ, ಒಂದು ತೆಂಗಿನಕಾಯಿನ್ನು, ಒಂದು ಅಚ್ಚು ಬೆಲ್ಲ, ಎಲೆ ಅಡಿಕೆಯನ್ನು ಅದೇ ಪೆಟ್ಟಿಗೆಯಲ್ಲಿ ಹಾಕಿ ಕೊಳ್ಳುವುದು.

**ಸೆರಗಿನ ಹಣ ಕಟ್ಟುವುದು :**

ಬಣ್ಣ ಬಂಗಾರದ ಪೆಟ್ಟಿಗೆ ತುಂಬಿದ ನಂತರ ಸೋದರ ಮಾವನವರಿಗೆ ಸೆರಗು ಹಣ ಕಟ್ಟುವುದಕ್ಕೆ ಒಂದು ಚೆಂಬಿನಲ್ಲಿ ನೀರು ಮತ್ತು ಒಂದು ಹರಿವಾಣದಲ್ಲಿ ವೀಳ್ಯ ಕೊಟ್ಟು ಕೇಳುವುದು. ನೆಲ್ಲಕ್ಕಿ ಅಡಿಯಲ್ಲಿದ್ದ ವರದ ದಿಬ್ಬಣ ಹೊರಡುವ ತಯಾರು ನಡೆಸುವುದು. ಆಗ ನೆಲ್ಲಕ್ಕಿ ಅಡಿಯಲ್ಲಿ ತಂದೆ ತಾಯಿ ಇಬ್ಬರೂ ಸೆರಗಿನ ಹಣವಾಗಿ ಮುಸುಕಿನ ವಸ್ತ್ರದ ಒಂದು ತುದಿಗೆ ಬೆಳ್ಳಿ ರೂಪಾಯಿಯನ್ನು ಕಟ್ಟುವುದು. ಇಲ್ಲಿ ಮನೆ ಯಜಮಾನತಿ ಮೊದಲು ಕಂಚಿಗೆ ಅಕ್ಕಿ ಹಾಕಿ, ದೀವಿಗೆಗೆ ಅಕ್ಕಿ ಹಾಕಿ ಕಂಚಿಯನ್ನೆತ್ತಿ ಕಂಚಿಮಿಯ ಹಸ್ತ ಕೊಡುವುದು. ಕಂಚಿ ಹಿಡಿಯುವವಳು ಕೂಡಾ ಕಂಚಿಗೆ ಅಕ್ಕಿ ಹಾಕಿ ದೀವಿಗೆಗೆ ಅಕ್ಕಿ ಹಾಕಿ ಯಜಮಾನತಿಯ ಕೈಯಿಂದ ಕಂಚಿಯನ್ನು ತೆಗೆದುಕೊಳ್ಳುವುದು. (ಕಂಚಿ ಹಿಡಿಯುವ ಕಂಚಿಮಿ ಬಹಳಷ್ಟು ಜಾಗರೂಕತೆಯಿಂದಿರುವವಳಾಗಿರಬೇಕು ಮತ್ತು ದೀವಿಗೆ ನಂದುವುದಾಗಲಿ ಕಂಚಿಯ ಹಿಡಿತ ತಪ್ಪುವುದಾಗಲಿ ಆಗಬಾರದು) ಈ ಸಮಯದಲ್ಲಿ ಮುಖ್ಯಸ್ಥರು / ಊರು ಗೌಡರು 'ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ದಿಬ್ಬಣವನ್ನು ಹೊರಡಿಸುಂತೆವೇ' ಎಂದು ಹೇಳುವರು. ಕಂಚಿಮಿಯು ಮುಂದಾಗಿಯೂ ಮತ್ತು ಮದುವಣ್ಣ, ಆಡೋಳಿಯ ಹಿಂದಾಗಿಯೂ ಮನೆಯ ಮೆಟ್ಟಲನ್ನು ಬಲಗಾಲು ಇಟ್ಟು ದಾಟಿ ಮೇಲ್ಕಟ್ಟಡಿಗೆ ಬಂದಾಗ ಸೋದರ ಮಾವ ಕೂಡ ಮದುವಣ್ಣನ ಮುಸುಕಿನ ವಸ್ತ್ರದ ಇನ್ನೊಂದು ತುದಿಗೆ ಒಂದು ಬೆಳ್ಳಿ ರೂಪಾಯಿಯನ್ನು ಸೆರಗಿನ ಹಣವಾಗಿ ಕಟ್ಟುವುದು.

**ದಿಬ್ಬಣ ವಹಿಸಿ ಕೊಡುವುದು :**

ಮೇಲ್ಕಟ್ಟಿನಡಿಯಲ್ಲಿ ವರನಿಗೂ, ಆಡೋಳಿಗೂ ನಡುವೆ ಒಬ್ಬರು ನಿಂತು ಮೊದಲೇ ಆಯ್ಕೆ ಮಾಡಿದ ದಿಬ್ಬಣದ ಮುಖ್ಯಸ್ಥರಿಗೆ ಹೀಗೆ ಹೇಳುವರು.

1) ಮದುವಣ್ಣನ ಕಡೆಯಿಂದ ಹೋಗಲಿರುವ ದಿಬ್ಬಣದ ಮುಖ್ಯಸ್ಥರು ಯಾರಯ್ಯಾ ? ಆಗ ಮುಖ್ಯಸ್ಥರು ನಾವಯ್ಯಾ ಎಂದು ಹೇಳುವುದು.

2) ನಾವು ಕೊಡುವ ದ್ವಹಸ್ತಗಳಿಗೆ ಚಾರು ಹಸ್ತಗಳನ್ನಾಗಿ ನಮ್ಮ ಸ್ವಾಧೀನ ತಂದೊಪ್ಪಿಸುವ ಮಹನೀಯರು ಯಾರಯ್ಯ ? ಈಗಲೂ ಮುಖ್ಯಸ್ಥರು ನಾವಯ್ಯ ಎಂದು ಹೇಳುವರು.

3) ನಮ್ಮ ಕುಮಾರನಿಗೆ ಶೃಂಗರಿಸಿದ ಮೈಯಾಭರಣಗಳಲ್ಲಾಗಲಿ, ಪಾವ ತೂಕದ ಚಿನ್ನಕ್ಕಾಗಲಿ, ಬೇಳೆ ತೂಕ ಬೆಳ್ಳಿಗಾಗಲಿ ಯಾವೊಂದು ಕುಂದು ಕೊರತೆ ಬಾರದೆ ನಮ್ಮ ಸ್ವಾಧೀನಕ್ಕೆ ಚಾರು ಹಸ್ತಗಳನ್ನಾಗಿ ತಂದೊಪ್ಪಿಸುವಿರಾಗಿ ನಂಬುತ್ತೇವೆ ಎಂದು ಹೇಳಿ 'ಹತ್ತು ಕುಟುಂಬ ಹದಿನೆಂಟು ಗೋತ್ರ ಬಂಧು ಬಾಂಧವರಲ್ಲಿ, ನೆಂಟರಿಷ್ಟರಲ್ಲಿ ಸರ್ವ ಸ್ವಜಾತಿ ಬಂಧುಗಳಲ್ಲಿ ಕೇಳಿ ದಿಬ್ಬಣವನ್ನು ದಿಬ್ಬಣದ ಮುಖ್ಯಸ್ಥರಿಗೆ ಸೀತಾವಳಿ ಚಪ್ಪರದ ಮೇಲ್ಕಟ್ಟಿನಡಿಯಲ್ಲಿ ವಹಿಸಿ ಕೊಡುವಂತ್ತೇವೇ ಎಂದು ಮೂರು ಬಾರಿ ಹೇಳಿ ದಿಬ್ಬಣ ವಹಿಸಿ ಕೊಡುವರು. ಆಗ ವಾದ್ಯಗೋಷ್ಠಿಯೊಂದಿಗೆ ದಿಬ್ಬಣದ ಮುಖ್ಯಸ್ಥರು, ಕಂಚಿಮಿ, ಮದುಮಗ ಆಡೋಳಿಯಲ್ಲದೇ ದಿಬ್ಬಣದ ಜೊತೆಯಲ್ಲಿ ಹೋಗಲಿರುವ ದಿಬ್ಬಣಸ್ಥರು ಕೂಡಾ ಹೋಗುವರು. ಹೋಗುತ್ತಿರುವಂತೆ ಒಕ್ಕಲೆಜಮಾನರು ದಿಬ್ಬಣದ ಮುಖ್ಯಸ್ಥರ ಹಸ್ತ ಮುಂಜಾಗ್ರತಾ ಕ್ರಮವಾಗಿ ದಾರಿ ಖರ್ಚಿಗೆ ಬೇಕಾದ ಹಣವನ್ನು ಕೊಡುವರು.

**ಹಾಲು ಕೊಡುವುದು :**

**ಸ್ವಲ್ಪ ದೂರ ಸಾಗಿದ ನಂತರ ಕುರ್ಚಿ, ಬೆಂಚುಗಳನ್ನು ಹಾಕಿ ಅಲ್ಲಿ ಮದುವಣ್ಣನ ಸಮೇತ ಎಲ್ಲರನ್ನು ಕುಳಿತುಕೊಳ್ಳಲು ಹೇಳಿ ಮದುವಣ್ಣನಿಗೆ, ಮದುವಣ್ಣನ ತಾಯಿ ಒಂದು ಗ್ಲಾಸು ಹಾಲು ತಂದು ಕೊಡುವರು. ಅದನ್ನು ಅವರು ಕುಡಿದು ಹಿಂತಿರುಗಿಸುವಾಗ ಆ ಗ್ಲಾಸಿಗೆ ಎಲೆ, ಅಡಿಕೆ ಹಾಕಿ ಕೊಟ್ಟು ತಾಯಿಯ ಪಾದ**

ನಮಸ್ಕಾರ ಮಾಡಬೇಕು. ಉಳಿದ ದಿಬ್ಬಣದವರಿಗೂ ಅಲ್ಲಿಗೆ ಕಾಫಿ, ಪಾನಕ ಕಳುಹಿಸುವರು. ದಿಬ್ಬಣವು ಹೊರಡ ನಂತರ ಹಿಂತಿರುಗಿ ನೋಡಬಾರದು ಎಂದು ಹಿಂದಿನ ಕಟ್ಟಳೆ. ಆದುದರಿಂದ ದಿಬ್ಬಣದವರು ಏನಾದರೂ ವಸ್ತುವನ್ನು ಮರೆತಿದ್ದರೆ ಅದನ್ನು ನೆನಪಿಸಿ, ಅವರು ಕುಳಿತ ಸ್ಥಳಕ್ಕೆ ತಲುಪಿಸುವುದಕ್ಕಾಗಿ ಈ ಕ್ರಮವನ್ನಿಟ್ಟುಕೊಂಡಿರುವರು. ದಿಬ್ಬಣವು ನಡೆದೇ ಸಾಗುತ್ತಿದ್ದರೆ ಮದುವಣ್ಣನಿಗೆ ಮನೆಯಲ್ಲಿ ಹಾಲು ಕೊಟ್ಟಂತೆ ದಾರಿಯಲ್ಲಿ ಸ್ವಜಾತಿ ಬಂಧುಗಳು ಕೂಡ ಹಾಲು ಕೊಡುವರು. ಅಲ್ಲಿಯೂ ಗ್ಲಾಸಿಗೆ ಎಲೆ, ಅಡಿಕೆ ಹಾಕಿ ಪಾದ ನಮಸ್ಕಾರ ಮಾಡುವುದು.

**ವಧುವಿನ ಮನೆಯಲ್ಲಿ :**

ಚಪ್ಪರ ಹಾಕುವಲ್ಲಿಂದ ಹಿಡಿದು ತಂದೆ ತಾಯಿ ಸೆರಗು ಹಣ ಕಟ್ಟುವಲ್ಲಿಯವರೆಗೆ ಎಲ್ಲಾ ಶಾಸ್ತ್ರಗಳು ಗಂಡಿನ ಮನೆಯಲ್ಲಿ ನಡೆದ ರೀತ್ಯಾ ವಧುವಿನ ಮನೆಯಲ್ಲೂ ನಡೆದಿರುತ್ತದೆ. ಸೋದರ ಮಾವ ಸೆರಗಿನ ಹಣ ಕಟ್ಟುವುದನ್ನು ಹೆಣ್ಣಿಗೆ, ಹೆಣ್ಣಿಳಿಸಿ ಕೊಡುವ ಸಮಯದಲ್ಲಿ ಕಟ್ಟುವರು. ವರನ ಮನೆಯಿಂದ ಕಳುಹಿಸಿದ ಕೊಡಿಯಾಳು ವಧುವಿನ ಮನೆಗೆ ತಲುಪಿ ಹೋಗಿ ಕ್ಷೇಮ ವಿಚಾರಿಸಿ, ಆತಿಥಿ ಸತ್ಕಾರ ಸ್ವೀಕರಿಸಿದ ನಂತರ ಗೌಡರು ಮತ್ತು ಮಡಿವಾಳನು ಮೇಲ್ಕಟ್ಟನ್ನು ಕಟ್ಟುವುದು. ನೆಲ್ಲಕ್ಕಿ ಅಡಿಯಲ್ಲಿ ಸೋದರ ಮಾವ ಕಾಸ್ತಾಳಿ ಕಟ್ಟುವುದರಿಂದ ಹಿಡಿದು. ಎಣ್ಣೆ, ಅರಶಿಣ ಸ್ನಾನ, ಗಂಗೆ ಪೂಜೆ ಮಾಡಿ ತಂದೆ ತಾಯಿ ಸೆರಗಿನ ಹಣ ಕಟ್ಟುವಲ್ಲಿಯವರೆಗಿನ ಎಲ್ಲಾ ಶಾಸ್ತ್ರ ಮಾಡಿ ನೆಲ್ಲಕ್ಕಿ ಅಡಿಯಲ್ಲಿ ಹಸೆಗೆ ಸರಿಯಾಗಿ ಕೂರಿಸುವುದು. ಕೆಲವು ಕಡೆ ಈಗಲೂ ಪದ್ಧತಿ ಪ್ರಕಾರ ವರನ ದಿಬ್ಬಣ ಬಂದ ನಂತರವೇ ಮದುರಂಗಿ ಶಾಸ್ತ್ರ ಮಾಡುವರು. ಏಕೆಂದರೆ ಎರಡು ಕೈಗಳಿಗೂ ಮದುರಂಗಿ ಇಡುವುದು ಮದುವೆಯಲ್ಲಿ ಮಾತ್ರ. ಹೆಣ್ಣಿಗೆ ಎಡಕ್ಕೆ ಮದುರಂಗಿ ಇಟ್ಟರೆ ಮದುವೆಯಾದಂತೆ ಮತ್ತು ಮದುವೆ ನಡೆಯಲೇಬೇಕು ಎಂದು ಇದೆ ಎರಡು ಕೈಗಳಿಗೆ ಮದುರಂಗಿ ಇಡುವುದು. ಮುತ್ತೈದೆತನಕ್ಕೆ ಸೇರಿದುದು. ಆದುದರಿಂದ ಕನ್ಯೆಗೆ ವರನ ದಿಬ್ಬಣ ಬಂದು ತಲುಪುವವರೆಗೆ ಇಲ್ಲವೇ ಕೊಡಿಯಾಳುವಿನ ಆಗಮನದ ನಂತರವಾದರೂ ಮದುರಂಗಿ ಶಾಸ್ತ್ರವನ್ನು ಮಾಡಿ ಮುಗಿಸಿ ಕನ್ಯೆಯ ಕಡೆಯವರು ಅಕ್ಕಿ ಮುಹೂರ್ತದ ಕ್ರಮ ಮಾಡುವಂತಿದ್ದರೆ ಅಕ್ಕಿ ಮುಹೂರ್ತವನ್ನು ಮುಗಿಸುವುದು. ಹುಡುಗಿಗೆ ತಂದೆ ತಾಯಿಯಿಂದ ಕೊಡುವ ಬಳುವಳಿ ಸಾಮಾನಿನ ಪಟ್ಟಿ ಮಾಡಿ ಅದನ್ನು ಪೆಟ್ಟಿಗೆಗೆ

ತುಂಬಿಸಿ ಗಂಡಿನ ದಿಬ್ಬಣ ಬರುವುದನ್ನು ನಿರೀಕ್ಷಿಸುತ್ತಾ, ಹಸೆ ಚಾಪೆಯಲ್ಲಿ ಹುಡುಗಿಯನ್ನು ಕೂರಿಸುತ್ತಾರೆ.

**ಪೆಟ್ಟಿಗೆ ತುಂಬಿಸುವುದು:**

ವಧುವಿನ ಮನೆಯಲ್ಲಿ ವಧುವನ್ನು ಮುಹೂರ್ತದಿಂದ ಏಳಿಸಿ ಊಟವಾದ ನಂತರ ದಿಬ್ಬಣ ಬರುವುದಕ್ಕೆ ಮೊದಲು ವಧುವಿನ ಸಮಕ್ಷಮದಲ್ಲಿ ವಧುವಿನ ತಾಯಿ ಅಥವಾ ಹಿರಿಯರು ಮೇಲ್ಕಟ್ಟಿನಡಿಯಲ್ಲಿ ನಂದಾ ದೀಪಕ್ಕೆ ಅಕ್ಕಿ ಹಾಕಿ ನಮಸ್ಕಾರ ಮಾಡಿ ಒಂದು ಹರಿವಾಣದಲ್ಲಿ ಅಕ್ಕಿ, ವೀಳ್ಯದೆಲೆ ಅಡಿಕೆ ಇಟ್ಟು ಮೂರು ಸಲ ಶೇಷೆ ಹಾಕಿ ಕೈ ಮುಗಿದು ಪೆಟ್ಟಿಗೆಯಲ್ಲಿ ವೀಳ್ಯದೆಲೆ ಅಡಿಕೆ ಇಟ್ಟು ಕೈ ಮುಗಿಯಬೇಕು. ಆಗ ಊರು ಗೌಡರು / ಮುಖ್ಯಸ್ಥರು ಎಲ್ಲರೂ ಸೇರಿ ವಧುವಿಗೆ ತಂದೆ ತಾಯಿಯ ಕಡೆಯಿಂದ ಕೊಡುವ ಎಲ್ಲಾ ಬಳುವಳಿ ಸಾಮಾನುಗಳನ್ನು ಪೆಟ್ಟಿಗೆಯಲ್ಲಿ ತುಂಬಿಸಿ ಅದರ ವಿವರವನ್ನು ಒಂದು ಪಟ್ಟಿ ಮಾಡಿ, ಅದರ ಒಂದು ಪ್ರತಿಯನ್ನು ಪೆಟ್ಟಿಗೆಯ ಮೇಲ್ಭಾಗದಲ್ಲಿ ಇಟ್ಟು, ಇನ್ನೊಂದು ಪ್ರತಿಯನ್ನು ವಧುವಿನ ತಂದೆಗೆ ಕೊಡುವರು.

**ವರನ ದಿಬ್ಬಣ ವಧುವಿನ ಮನೆಯಲ್ಲಿ :**

ವರನ ದಿಬ್ಬಣವು ವಧುವಿನ ಮನೆಗೆ ಆಗಮಿಸಿದಾಗ, ವಧುವಿನ ಕಡೆಯವರು ದಿಬ್ಬಣದವರಿಗೆ ಚಪ್ಪರದಿಂದ ಹೊರಗೆ ಪ್ರತ್ಯೇಕ ಸ್ಥಳ ಏರ್ಪಡಿಸಿ ಕೂರುವುದಕ್ಕೆ ಅನುಕೂಲ ಮಾಡಿಕೊಡುವರು. ನೀರು ಮತ್ತು ವೀಳ್ಯವನ್ನು ಗಂಡಸರು ಪ್ರತ್ಯೇಕ ಗಂಡಸರಿಗೂ, ಹೆಂಗಸರು ಪ್ರತ್ಯೇಕ ಹೆಂಗಸರಿಗೂ ಕೊಟ್ಟು ಪದ್ಧತಿಯಂತೆ ಮಾತನಾಡಿಸುವುದು. ಮನೆಯ ಅಕ್ಕಂದಿರು ಪ್ರತ್ಯೇಕ ದಿಬ್ಬಣದವರನ್ನು ನೀರು ಚಾಪೆ ಕೊಟ್ಟು ಮಾತನಾಡಿಸುವುದು.

**ಮುಖ್ಯಸ್ಥರ ಪ್ರವೇಶ :**

ದಿಬ್ಬಣ ಮಾತನಾಡಿಸಿದ ನಂತರ ದಿಬ್ಬಣದ ಕಡೆಯ ನೆಂಟರು ನಿಯಮದಂತೆ ಕೋಟು ಪಂಚೆ ಪೋಷಾಕು ಹಾಕಿ ಕೊಡೆ ಕೋಲಾಗಿ ಮೂರು ಜನ ಗಂಡಸರು ನೆಂಟರಾಗಿ ವಧುವಿನ ಮನೆಗೆ ಹೋಗುವುದು. ಅಲ್ಲಿ ಅವರು ಗಂಡಿನ ಕಡೆಯಿಂದ ದಿಬ್ಬಣಾಡಿ ಬಂದ ನೆಂಟರು ನಾವು ಎಂದು ಹೇಳುವುದು. ಅವರಿಗೆ ನೀರು, ವೀಳ್ಯ

ಕೊಟ್ಟು ಸ್ವಾಗತಿಸುವರು. ಮಾತ್ರವಲ್ಲ ಕೊಡೆ ಕೋಲನ್ನು ಕೇಳಿ ತೆಗೆದಿಡುವರು. ನೆಂಟರು ನೆಲ್ಲಕ್ಕಿ ಅಡಿಯಲ್ಲಿ ಕುಳಿತಿರುವ ವಧುವಿಗೆ ಹಣ ಕಟ್ಟಿ ಆಶೀರ್ವದಿಸಿ ದಿಬ್ಬಣದವರು ಬಣ್ಣ ಬಂಗಾರ ತರುವುದಕ್ಕೆ ಸಮಯ ನಿಶ್ಚಯಿಸಿ ತಮ್ಮ ಕೊಡೆ ಕೋಲವನ್ನು ಮರಳಿ ಪಡೆದು ವಾಪಸು ಬರುವುದು.

**ಹಾಲು ಕೊಡುವುದು :**

ಮದುವಣ್ಣನಿಗೆ ವಧುವಿನ ತಾಯಿ ಹಾಲು ತಂದು ಕೊಡುವುದು. ಅದನ್ನು ಸ್ವೀಕರಿಸಿ ಕುಡಿದ ನಂತರ ಆ ಗ್ಲಾಸಿಗೆ ಹಣ ಮತ್ತು ಎಲೆ ಅಡಿಕೆಯನ್ನು ಹಾಕಿ ಹಿಂತಿರುಗಿಸಿ ಅತ್ತೆಯ ಪಾದಕ್ಕೆ ನಮಸ್ಕಾರ ಮಾಡುವುದು. ಅತ್ತೆಯಾದವರು ಗ್ಲಾಸಿನಲ್ಲಿದ್ದ ಹಣವನ್ನು ಮದುವಣ್ಣನ ಮುಸುಕಿನ ವಸ್ತ್ರಕ್ಕೆ ಕಟ್ಟಿ ಆಶೀರ್ವಾದ ಮಾಡುವರು. (ಹಣವನ್ನು ಗ್ಲಾಸಿಗೆ ಕಾಣಿಕೆಯಾಗಿ ಹಾಕವುದು ಧಾರಾ ಮುಹೂರ್ತವಾಗುವವರೆಗೆ ವರನು ವಧುವಿನ ಮನೆಯ ಹಂಗಿನವನಾಗಿರಬಾರದು ಎಂದು.)

**ಸಾಣೆಕಲ್ಲು, ಗಂಧದ ಕೊರಡು :**

ಸಾಣೆಕಲ್ಲು ಗಂಧದ ಕೊರಡನ್ನು ದಿಬ್ಬಣದ ಕಡೆಯವರಿಗೆ ವಧುವಿನ ಕಡೆಯವರು ಕೊಡುವರು. ಹಾಗೆ ಕೊಡುವಾಗ ಹತ್ತು ಕಿಲೋ ಸಾಣೆಕಲ್ಲು, ಇಪ್ಪತ್ತು ಕಿಲೋ ಗಂಧದ ಕೊರಡನ್ನು ಎತ್ತಿ ಕೊಡುವಂತೆವೇ ಎಂದು ಪದ್ಧತಿಯಾಗಿ ಹೇಳಿ ಕೊಡುವರು.

**ವೀಳ್ಯ ಕೊಡುವುದು :**

ದಿಬ್ಬಣದ ಕಡೆಯ ಮುಖ್ಯಸ್ಥರು ವಧುವಿನ ಕಡೆಯ ಮುಖ್ಯಸ್ಥರಿಗೆ, ನೆಂಟರಿಗೆ ನೀರು, ಚಾಪೆ ತಂದವರಿಗೆ, ಊರ ಅಣ್ಣಂದಿರಿಗೆ, ಸೋದರ ಮಾವನಿಗೆ, ಒಕ್ಕಲೆಜಮಾನರಿಗೆ, ಗಂಧದ ಕೊರಡು, ಸಾಣೆಕಲ್ಲು ತಂದವರಿಗೆ, ಅದೇ ರೀತಿ ಪರಸ್ಪರ ಹೆಂಗಸರ ಕಡೆಯವರಿಗೂ ವೀಳ್ಯ ಕೊಡುವುದು.

**ಬಣ್ಣ ಬಂಗಾರ ತೆಗೆದುಕೊಂಡು ಹೋಗುವುದು :**

ನೆಂಟರು ಹಿಂತಿರುಗಿದೊಡನೆ ದಿಬ್ಬಣದ ಮುಖ್ಯಸ್ಥರು ಕೋಟು, ಪಂಚೆ, ಬಿಳಿ ಶರ್ಟು ಹಾಕಿ ತಲೆಗೆ ಪೇಟ ಕಟ್ಟಿ, ಕೊಡೆ ಕೋಲಾಗಿ ಸೀತಾವಳಿ ಚಪ್ಪರದ ಮುಂದೆ ಬಂದು ಉಳಿದ ನಾಲ್ಕು ಗೃಹಸ್ಥರು ಜೊತೆಯಾಗಿ ಹಿಂದಿನಿಂದ ಬಣ್ಣ ಬಂಗಾರದ ಪೆಟ್ಟಿಗೆಯ ಸಹಿತ ಮೂರು ಅಥವಾ ಐದು ಮುತ್ತೈದೆಯರು, ಅವರ ಹಿಂದಿನಿಂದ

ಒಂದು ಮಣ್ಣಿನ ದೀಪ ಸಮೇತ ತೆಂಗಿನೆಣ್ಣೆ, ಚೆಂಬು, ಮದುಮಗಳ ಶೃಂಗಾರಕ್ಕೆ ಬೇಕಾದ ವಸ್ತುಗಳೊಂದಿಗೆ ಈಗ ಹೇಳಿದ ಎಲ್ಲರೂ ಚಪ್ಪರದ ಬಾಳೆ ಕಟ್ಟಿದ ಮುಂಬಾಗಿಲಿಗೆ ಬಂದು ನಿಲ್ಲುವುದು. ಅದೇ ಸಮಯಕ್ಕೆ ಸರಿಯಾಗಿ ಚೌಕಿಯಲ್ಲಿ ವಧುವಿನ ಕಡೆಯ ಊರು ಗೌಡರು / ಮುಖ್ಯಸ್ಥರು, ಗೃಹಸ್ಥರು ಕುಳಿತಿದ್ದು, ವರನ ಕಡೆಯಿಂದ ಬಣ್ಣ ಬಂಗಾರ ತರುವ ನೆಂಟರನ್ನು ಗಮನಿಸುವರು. ಆಗ ವರನ ಭಾಗದ ದಿಬ್ಬಣದ ಮುಖ್ಯಸ್ಥರು ಅವರ ಜಿಲ್ಲೆ, ತಾಲೂಕು, ನಾಡು, ಗ್ರಾಮ ಮತ್ತು ಕುಟುಂಬದ ಯಜಮಾನರ ಹೆಸರು ಹೇಳಿ ಅದೇ ರೀತಿ ವಧುವಿನ ಪರಿಚಯ ವಿಳಾಸ ಹೇಳಿ ಕುಟುಂಬದ ಯಜಮಾನರ ಅನುಮತಿ ಮೇರೆ ನಾವು ದಿಬ್ಬಣದ ಮುಂದೆ ಮುಖ್ಯಸ್ಥರು ಬಂದಿದ್ದೇವೆ ಎಂದು ಮೂರು ಸಲ ಹೇಳಬೇಕು. ನಮ್ಮ ಬಣ್ಣ ಬಂಗಾರ ಹೇರು ಹರಿವಾಣ ಸಮೇತ ಸೀತಾವಳಿ ಚಪ್ಪರದ ಕೆಳಗೆ ಬರುವುದಕ್ಕೆ ಅನುವುಬೇಕೆಂದು ಕೇಳುವುದು. ಅನುವು ಅದ ನಂತರ ಚಪ್ಪರದ ಮೇಲ್ಕಟ್ಟಡಿಗೆ ಬರುವುದಕ್ಕೆ ಅನುವು ಕೇಳುವುದು. ಅನುವು ಆದ ನಂತರ ದೇವಸಭೆಗೆ ಬರುವುದಕ್ಕೆ ಅನುವು ಕೇಳುವುದು. ಅನು ಆದ ನಂತರ ಬಣ್ಣ ಬಂಗಾರ ಇಟ್ಟು ಕುಳಿತುಕೊಳ್ಳುವುದಕ್ಕೆ ಅನುವು ಕೇಳುವುದು. ಅನುವು ಅದ ನಂತರ ಸರ್ವರಿಗೂ ನಮಸ್ಕಾರ ಹೇಳಿ ದೇವಸಭೆಯಲ್ಲಿ ಮೂರು ಜನ ಕುಳಿತುಕೊಳ್ಳುವುದು.

**ದೇವಸಭೆ :**

ದೇವಸಭೆ ಎಂದರೆ ಹನ್ನೆರಡು ಕಂಬದ ಚಪ್ಪರದ ನಡುವಿನಲ್ಲಿ ಚಾಪೆ ಹಾಕಿ ವೀಳ್ಯ ಶಾಸ್ತ್ರಕ್ಕೆ ಇಟ್ಟ ಕ್ರಮದಂತೆ ಮಣೆ, ನಂದಾದೀಪ, ಹರಿವಾಣಗಳನ್ನೆಲ್ಲವನ್ನು ಜೋಡಿಸಿದ ಮೇಲ್ಕಟ್ಟಿನಡಿಯಲ್ಲಿ ಬಣ್ಣ ಬಂಗಾರ ಬಳಸಲು ಮತ್ತು ತೆರವಿನ ಹಣ ಕೊಡುವುದಕ್ಕಾಗಿ ಕುಳಿತುಕೊಳ್ಳುವ ಎದುರುಬದರಿನ ಮೂರು ಮೂರು ಜನರ ಸಮೂಹಕ್ಕೆ ದೇವಸಭೆ ಎಂದು ಹೆಸರು.

**ಬಣ್ಣ ಬಂಗಾರ ಬಳಸುವುದು:**

ಹಿಂದೆ ಹೇಳಿದ ಕ್ರಮದಂತೆ ಮಾತು ಮುಗಿಸಿ ಕಂಚಿಗೆ ಬಣ್ಣ ಬಂಗಾರ ಬಳಸುವುದಕ್ಕೆ ಅನುವು ಆದ ನಂತರ ಪ್ರಥಮವಾಗಿ ಓಲೆ, ಓಲೆಭಾಗ್ಯ, ಮುತ್ತೈದೆ ಮೂಗು ಬೊಟ್ಟು ಮುಂತಾದ ಬಂಗಾವನ್ನು ಮೊದಲು ಬಳಸಿ, ನಂತರ ಬೆಳ್ಳಿ

ಸಾಮಾನುಗಳನ್ನು ಬಳಸಿ, ಧಾರೆ ಸೀರೆ, ರವಕೆ, ಮುಸುಕಿನ ವಸ್ತ್ರ, ಡಾಬು ಎಲ್ಲವನ್ನು ವಧುವಿನ ಕಡೆಯವರಿಗೆ ತೋರಿಸಿ, ತಟ್ಟೆಗೆ ಬಳಸುವುದು. (ಕಡಗ, ಕಂಕಣ, ಕಾಲುಂಗುರ ಹಿಂಗಾರವನ್ನು ಇಟ್ಟಿರಬೇಕು) ಮುತ್ತೈದೆಯರು ತಲೆಗೆ ವಸ್ತ್ರ ಹಾಕಿ ದಿಬ್ಬಣದ ಕಡೆಯಿಂದ ದೀಪ ಹಿಡಿದು ಬಂದು ಶೋಭಾನೆ ಹೇಳುತ್ತಾ ನಿಂತಿರುತ್ತಾರೆ. ದೀವಿಗೆಯನ್ನು ಬಹಳ ಜಾಗ್ರತೆಯಿಂದ ನೋಡಿಕೊಳ್ಳುವುದು. ಮತ್ತೊಂದು ಹರಿವಾಣದಲ್ಲಿ ವೀಳ್ಯವನ್ನು ಬಳಸಿ, 'ಹತ್ತು ಕುಟುಂಬ ಹದಿನೆಂಟು ಗೋತ್ರ ದೇವಸಭೆಯಲ್ಲಿ ಸಮಸ್ತರ ಸಂಗಡ ಕೇಳಿ ಬಣ್ಣ ಬಂಗಾರವನ್ನು ಎತ್ತಿ ಕೊಡುವಂತವೇ' ಎಂದು ಮೂರು ಬಾರಿ ಹೇಳುವುದು. ಅಷ್ಟರಲ್ಲಿ ವಧುವಿನ ಭಾಗದ 2 ಮುತ್ತೈದೆಯರು ತಲೆಗೆ ವಸ್ತ್ರ ಹಾಕಿ ದೀಪಕ್ಕೂ, ಬಣ್ಣ ಬಂಗಾರ ಬಳಸಿದ ತಟ್ಟೆಗೂ ಅಕ್ಕಿ ಹಾಕಿ 5/7 ಬಾರಿ ನಮಸ್ಕರಿಸಿ, ತೆಗೆದುಕೊಂಡಾಗ ದಿಬ್ಬಣದ ಕಡೆಯ ಮುತ್ತೈದೆಯರು ಕೂಡಾ ದೀಪಕ್ಕೂ, ಬಣ್ಣ ಬಂಗಾರ ಬಳಸಿದ ತಟ್ಟೆಗೂ ಅಕ್ಕಿ ಹಾಕಿ ನಮಸ್ಕರಿಸಿ ಅವರಿಂದ ತಾವು ತೆಗೆದುಕೊಂಡು, ದೀಪವನ್ನು ಮುಂದೆ ಹಿಡಿದು ಹಿಂದಿನಿಂದ ಬಣ್ಣ ಬಂಗಾರವನ್ನು ಮತ್ತು ಅದರೊಂದಿಗೆ ಮರದ ಬಾಚಣಿಗೆ, ಕರಿಮಣಿ, ಬಿಚ್ಚೋಲೆ, ಶೃಂಗಾರ ಸಾಧನಗಳ ಸಮೇತ ಒಂದು ಚಿಕ್ಕ ಚೂರಿ (ಹಿಂಗಾರ ಒಡೆಯುವುದಕ್ಕೆ) ತೆಗೆದುಕೊಂಡು ಶೋಭಾನೆ ಹೇಳುತ್ತಾ ವಧುವಿನ ಮನೆಯ ನೆಲ್ಲಕ್ಕಿ ಅಡಿಯಲ್ಲಿ ವಧುವು ಕುಳಿತ ಹಸೆ ಚಾಪೆಗೆ ಬರುವುದು.

**ಹೆಣ್ಣು ಹುಡುಕುವುದು:**

ನೆಲ್ಲಕ್ಕಿ ಅಡಿಯಲ್ಲಿ ಹಸೆಗೆ ಸರಿಯಾಗಿ ಹಸೆ ಚಾಪೆಯಲ್ಲಿ ವಧುವು ಮತ್ತು ಅವಳೊಂದಿಗೆ ನಾಲ್ಕೈದು ಕನ್ಯೆಯರು ಒಟ್ಟು ಮುಸುಕು ಹಾಕಿ ಕುಳಿತಿರುವರು. ದಿಬ್ಬಣದ ಕಡೆಯ ಅಕ್ಕಂದಿರು ಸರಿಯಾಗಿ ಗುರುತಿಸಿ ಪ್ರಥಮವಾಗಿ ವಧುವನ್ನು ಮುಟ್ಟಿದರೆ ಶುಭವೆಂದು, ತಪ್ಪಿದರೆ ವಧುವಿನ ಕಡೆಯ ಅಕ್ಕಂದಿರು ತಮಾಷೆಯಾಗಿ ಮುಟ್ಟಿದ ಕನ್ಯೆಯನ್ನೇ ಕೊಡುವುದಾಗಿ ತರ್ಕ ಮಾಡುವರು. ಆನಂತರ ವಧುವು ಧರಿಸಿದ ಬಟ್ಟೆ, ಚಿನ್ನ ವಗೈರೆ ತೆಗೆಯಿಸಿ ಬಣ್ಣ ಬಂಗಾರದಲ್ಲಿ ತಂದಿದ್ದ ಸೀರೆ, ರವಕೆ, ಓಲೆ, ಮೂಗುತ್ತಿ, ಕಾಲುಂಗುರ, ಕಡಗ ಎಲ್ಲವನ್ನು ತೊಡಿಸಿ, ಮರದ ಬಾಚಣಿಗೆಯಲ್ಲಿ ಶಾಸ್ತ್ರಕ್ಕಾದರೂ ತಲೆ ಬಾಚಿದ ನಂತರ ಬೇರೆ ಉಪಯೋಗಿಸುವುದು. ಪೂರ್ಣ ಶೃಂಗರಿಸಿದ ನಂತರ ಮಡಿಲಕ್ಕಿಯನ್ನು ಕಟ್ಟುವುದು. ಪುನಃ ವಧುವನ್ನು ನೆಲ್ಲಕ್ಕಿ ಅಡಿಯಲ್ಲಿ ಕೂರಿಸುವುದು.

**ವೀಳ್ಯ ಬಳಸುವುದು :**

ಬಣ್ಣ ಬಂಗಾರವನ್ನು ಮತ್ತೈದೆಯರು ತೆಗೆದುಕೊಂಡು ಹೋದ ನಂತರ ಚೌಕಿಯಲ್ಲಿ ಕುಳಿತವರು ವೀಳ್ಯ ಶಾಸ್ತ್ರದಲ್ಲಿ ಉಳಿದ ವೀಳ್ಯವಾದ ತಾಯಿ ವೀಳ್ಯ, ತಂದೆ ವೀಳ್ಯ ಮತ್ತು ದೇಶ ಮಹಾನಾಡು ವೀಳ್ಯವನ್ನು ಬಳಸಿ ವೀಳ್ಯ ಶಾಸ್ತ್ರದ ಪೂರ್ಣ ಕ್ರಮವನ್ನು ಮುಗಿಸುವರು. ಈ ಸಮಯದಲ್ಲಿ ವೀಳ್ಯ ಶಾಸ್ತ್ರದಲ್ಲಿ ಮಾಡಿದ ಎಲ್ಲಾ ಕ್ರಮದಂತೆ ಮಾಡಿ ನೀರು ಮುಟ್ಟಿ ಅನುವು ಕೇಳಿ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳುವಾಗ 'ದೇವಸಭೆ' ಎಂದು ಸೇರಿಸಿಕೊಳ್ಳುವುದು. ವೀಳ್ಯ ಕಟ್ಟಿ ಆದರ ನಂತರ ಕಂಚಿಯಲ್ಲಿ ತೆರವಿನ ಹಣ ಬಳಸುವುದು.

**ತೆರವಿನ ಹಣ :**

ತೆರವಿನ ಹಣವಾದ ರೂ. 10–25 ಪೈಸೆಯನ್ನು (6–25) ಪೈಸೆಗೆ ಕಂಚಿಗೆ ಬಳಸಿ ವೀಳ್ಯದೊಂದಿಗೆ ಕೊಡುವುದು. ತೆರವಿನ ಹಣವಾದ ರೂ. 10–25 ಪೈಸೆಯಲ್ಲಿ ಶೃಂಗೇರಿ ಮಠಕ್ಕೆ ಮುತ್ತೈದೆ ಕಾಣಿಕೆಯಾಗಿ ರೂ. 6–25 ಆಗಿರುತ್ತದೆ. ಉಳಿದ 4 ರೂ.ಗಳಲ್ಲಿ ಸ್ಥಳ ಮರ್ಯಾದೆಯಾಗಿ ರೂ. 1–25 ಪೈಸೆ, ಹಾಲೆ ಮರದ ಪಾದ ಕಂಬದ ಕಾಣಿಕೆಯಾಗಿ ರೂ. 1–25 ಪೈಸೆ. ಆರತಿಗಾಗಿ ರೂ. 1–25 ಪೈಸೆ ಮತ್ತು ಎಲೆ ಅಡಿಕೆಯ ಖರ್ಚಿಗಾಗಿ 0–25 ಪೈಸೆ ಎಂಬ ವಿವರ ಇದೆ. (ಅದೇ ರೀತಿಯಲ್ಲಿ ಕೆಲವು ಕಡೆ ಒಟ್ಟು ರೂ. 6–25 ಪೈಸೆಯ ತೆರವಿನ ಹಣವನ್ನು ಬಳಸುವರು) ಕಂಚಿಗೆ ಸೇರಿದ ತೆರವಿನ ಹಣದೊಂದಿಗೆ ವೀಳ್ಯವನ್ನಿಟ್ಟು ಮೇಲೆ ಬಿಳಿ ವಸ್ತ್ರ ಮುಚ್ಚಿ 'ಹತ್ತು ಕುಟುಂಬ ಹದಿನೆಂಟು ಗೋತ್ರ ದೇವಸಭೆ ಸಮಸ್ತರ ಸಂಗಡ ಕೇಳಿ ಒಕ್ಕಲೆಜಮಾನರಿಗೆ ಚಪ್ಪರದ ಮೇಲ್ಕಟ್ಟಿನಡಿಯಲ್ಲಿ ತೆರವಿನ ಹಣದ ಕಂಚಿಗೆಯನ್ನು ಎತ್ತು ಕೊಡುವಂತೆವೇ' ಎಂದು ಮೂರು ಬಾರಿ ಹೇಳಿ ಒಕ್ಕಲೆಜಮಾನರ ಹಸ್ತ ಕೊಡುವುದು. ಈಗ ಧಾರೆಗೆ ಸಮಯವಾದರೆ ಸೋದರ ಮಾವ ವಧುವಿಗೆ ಈ ಸಮಯದಲ್ಲಿ ಸೆರಗು ಹಣ ಕಟ್ಟುವುದು. ವರನ ಮನೆಯಲ್ಲಿ ನೀರು ಕೊಟ್ಟಂತೆ ಸೋದರ ಮಾವನಿಗೆ ಸೆರಗು ಹಣ ಕಟ್ಟುವುದುದಕ್ಕೆ ನೀರು, ವೀಳ್ಯ ಕೊಟ್ಟು ಕರೆಯಬೇಕು ವಧುವಿನ ಶೃಂಗಾರ ಮುಗಿಸಿ, ಉಳಿದ ಹಿಂಗಾರದಲ್ಲಿ ಎರಡು ಹಿಂಗಾರ ಹೂವಿನ ಮಾಲೆ ಕಟ್ಟಿ ಧಾರೆ

ಸಮಯಕ್ಕಾಗಿ ಕಾಯ್ದಿರಿಸುವುದು. ವಧುವಿನ ಶೃಂಗಾರ ಮಾಡಿ ಅಕ್ಕಂದಿರು ಹೊರಗೆ ಬಂದ ನಂತರವೇ ಮೇಲ್ಕಟ್ಟಿನಡಿಯಿಂದ ದೇವಸಭೆಯಲ್ಲಿ ಕುಳಿತವರು ಅನುವು ಪಡೆದು ಏಳುವುದು. ಧಾರೆಗೆ ಸಮಯವಾದರೆ ಒಡನೆಯೇ ಧಾರಾ ಕಾರ್ಯಕ್ರಮ ಮುಂದುವರಿಯುವುದು.

**ಆರತಿ ಮಾಡುವುದು :**

ಧಾರಾ ಕಾರ್ಯಕ್ಕೆ ಕೆಲವೇ ಸಮಯಕ್ಕೆ ಮೊದಲು ವರನ ದಿಬ್ಬಣವನ್ನು ಚಪ್ಪರದ ಮುಂಭಾಗಕ್ಕೆ ಬರ ಮಾಡಿಸಿ ಮುತ್ತೈದೆಯರಿಂದ ಆರತಿ ಮಾಡಿಸುವುದು. ಈಗ ಚಿಕ್ಕ ಹೆಣ್ಣು ಮಕ್ಕಳಿಂದ ಮದುವಣ್ಣನ ಕಾಲು ತೊಳೆಯಬೇಕು. ಕಾಲು ತೊಳೆಯುವ ಆ ಚೆಂಬಿಗೆ ಎಲೆ ಅಡಿಕೆ ಮತ್ತು ಹಣ ಹಾಕಿ ಕಳುಹಿಸಬೇಕು. ಆರತಿಯು 5/ 7/ 9 ಸಂಖ್ಯೆಯಲ್ಲಿ ಆಗಬೇಕು. ಆರತಿ ಮಾಡಿ ತಟ್ಟೆಗೆ ಅಡೋಳಿಯು ಎಲೆ ಅಡಿಕೆ ಹಾಕಿ ಕಳುಹಿಸಬೇಕು. ಇಲ್ಲಿಯೂ ಒಂದು ದೃಷ್ಟಿಕಾಯಿ ಒಡೆದು ಮೆಲ್ಲನೆ ಚಪ್ಪರದ ಮೇಲ್ಕಟ್ಟಿನಡಿಗೆ ವರನ ಬಲಭಾಗದಲ್ಲಿ ಕಂಚಿಮಿಯು, ವರನ ಹಸ್ತ ತಾಳಿಸರ ಇಟ್ಟು ಬರುವುದು. ಮೇಲ್ಕಟ್ಟಿನಡಿಯಲ್ಲಿ ಮಡಿವಾಳನು ಅಡಿಗೆ ಮಡಿ ಹಾಸಿರಬೇಕು.

**ಧಾರೆ ಕಾರ್ಯಕ್ರಮ :**

ಮೇಲ್ಕಟ್ಟಿನಡಿಯಲ್ಲಿ ಮದುವಣ್ಣನ ಎದುರಿನಲ್ಲಿ ಒಂದು ಬಿಳಿ ಬಟ್ಟೆ ತೆರೆ ಹಿಡಿದಿರಬೇಕು. ವಧುವಿನ ಸೋದರ ಮಾವನು ನೆಲ್ಲಕ್ಕಿ ಅಡಿಯಲ್ಲಿ ವಧುವಿಗೆ ಸೆರಗಿನ ಹಣ ಕಟ್ಟಿ ಮೇಲ್ಕಟ್ಟಿನಡಿಗೆ ವಧುವನ್ನು ಎತ್ತಿ ತಂದು ಮೇಲ್ಕಟ್ಟಿನಡಿಯಲ್ಲಿ ನಿಲ್ಲಿಸುವರು. (ವಧುವನ್ನು ಸೋದರ ಮಾವ ಎತ್ತಿ ತರುವುದು, ದಿಬ್ಬಣದ ಕಡೆಯವರಿಗೆ ಸೋದರರದವರ ಕಡೆಯಿಂದ, ಆ ವಧುವನ್ನು ಕೊಡುವುದಕ್ಕೆ ಯಾವುದೇ ತರಹದಲ್ಲಿ ಅಸಮಾಧಾನವಿಲ್ಲ ಎಂದು ಖಾತರಿಪಡಿಸುವುದಕ್ಕಾಗಿ ವೀಳ್ಯ ಶಾಸ್ತ್ರಕ್ಕೆ ಮೊದಲೇ ವಧುವಿನ ಕಡೆಯಿಂದ ಸೋದರ ಮಾತನಾಡಿಸಿ ಅವರಿಂದ ಆಕ್ಷೇಪಣೆ ಇಲ್ಲವೆಂಬುದನ್ನು ಸರ್ವರ ಎದುರಿನಲ್ಲಿ ದೃಢಪಡಿಸುವುದೇ ಈ ಕ್ರಮ ಎಂದು ತಿಳಿದಿದೆ.) ಒಂದು ಚೆಂಬು ನೀರು ತೆಗೆದುಕೊಂಡು ಸರ್ವರಿಗೂ ಧಾರಾ ಕಾರ್ಯಕ್ಕೆ ನೀರು ಎಂದು ಎಲ್ಲರಲ್ಲೂ ಮುಟ್ಟಿಸಿ ತರುವುದು. ವಧುವಿನ ತಂದೆ ಒಂದು ಕಂಚಿನ ಚೆಂಬನ್ನು ಹಿಡಿದು ವಧುವರರ ಮಧ್ಯೆ ಪಕ್ಕಲಾಗಿ ನಿಂತಿರಬೇಕು. ಈಗ ಉಭಯಸ್ಥ ಮುತ್ತೈದೆಯರು

ಬಂದು ಕಂಚಿಮಿಗೆ ಅಕ್ಕಿ ಹಾಕಿ ನಮಸ್ಕರಿಸಬೇಕು. ನಂತರ ಕಂಚಿಮಿಯಲ್ಲಿದ್ದ ತೆಂಗಿನಕಾಯಿ ತೆಗೆದು ಹಾಲು ಬದಲಾಯಿಸಿ ಕಾಯಿಯನ್ನು, ದೀಪವನ್ನು, ಹಿಂಗಾರವನ್ನು, ಎಲೆ, ಅಡಿಕೆ, ಕುಂಕುಮ ಕರಡಿಗೆ, ವಿಭೂತಿ ಎಲ್ಲವನ್ನು ಅದಲು ಬದಲು ಮಾಡಿ, ಎರಡು ಕಂಚಿನ ಗಿಂಡಿಯಿಂದಲೂ ವಧುವಿನ ತಂದೆ ಹಿಡಿದಿರತಕ್ಕ ಕಂಚಿನ ಚೆಂಬಿಗೆ ಹಾಲನ್ನು ಹುಯಿದು. ನಂತರ ವಧುವರರ ಕೈಯಲ್ಲಿ 5 ಎಲೆ ಒಂದು ಅಡಿಕೆಯನ್ನು ಕೊಟ್ಟು ಇಬ್ಬರ ಕೈಗಳನ್ನು ಜೋಡಿಸಿ (ಕಂಚಿಗೆ ಅಕ್ಕಿ ಹಾಕಿ ನಂತರ ತೆರೆ ತಗ್ಗಿಸುವುದು.) ವರನ ಕೈಯ ಮೇಲೆ ವಧುವಿನ ಕೈಗಳನ್ನರಿಸಿ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆಯ ಮಾತನ್ನು ಮೂರು ಬಾರಿ ಹೇಳಿ ವಧುವಿನ ತಂದೆ ಮೂರು ಬಾರಿ ಚೆಂಬಿನಲ್ಲಿದ್ದ ಹಾಲನ್ನು ಕೈಗಳಿಗೆ ಧಾರೆ ಎರೆಯಬೇಕು (ಈ ಸಮಯದಲ್ಲಿ ಒಲಗವನ್ನು ನಿಲ್ಲಿಸಿ ಧಾರೆಯ ನಂತರ ವಾದ್ಯ ಮಾಡುವುದು) ಮೂರನೆಯ ಸಲ ಧಾರೆ ಎರೆದಾದ ಎಲೆ ಅಡಿಕೆಯ ಸಮೇತ ಇಬ್ಬರೂ ಕೆಳಗೆ ಹಿಡಿದಿರತಕ್ಕ ಬಟ್ಟಲಿಗೆ ಎಲೆ ಅಡಿಕೆಯನ್ನು ಬಿಡುವುದು. ಬಟ್ಟಲಿನಲ್ಲಿದ್ದ ಈ ಹಾಲನ್ನು ತೆಂಗಿನ ಮರ ಅಥವಾ ಹಾಲು ಬರುವ ಫಲ ವೃಕ್ಷದ ಬುಡಕ್ಕೆ ಚೆಲ್ಲಬೇಕು.

**ಮಾಂಗಲ್ಯ ಕಟ್ಟುವುದು :**

ಆ ನಂತರ ಪ್ರಥಮವಾಗಿ ವರನ ಕೊರಳಿಗೆ ಹಿಂಗಾರದಿಂದ ಕಟ್ಟಿದ ಹೂಮಾಲೆಯನ್ನು ಹಾಕುವುದು. ವರನು ಸಹ ವಧುವಿನ ಕೊರಳಿಗೆ ಹಿಂಗಾರದ ಹೂಮಾಲೆಯನ್ನು ಹಾಕುವುದು ಮತ್ತು ಬೇರೆಯೇ ಆದ ಎರಡು ಪುಷ್ಪ ಮಾಲೆಯನ್ನು ವಧುವು ವರನ ಕೊರಳಿಗೂ, ವರನು ವಧುವಿನ ಕೊರಳಿಗೂ ಹಾಕುವುದು. ನಂತರ ಪದ್ಧತಿ ಪ್ರಕಾರ 'ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ಥರ ಸಭೆಯಲ್ಲಿ ಸಮಸ್ತರ ಸಂಗಡ ಕೇಳಿ.......... ಗೋತ್ರದ......... ಎಂಬ ವರನು................ ಗೋತ್ರದ................ ಎಂಬ ವಧುವಿಗೆ ಸೀತಾವಳಿ ಚಪ್ಪರದ ಮೇಲ್ಕಟ್ಟಿನಡಿಯಲ್ಲಿ ಮಾಂಗಲ್ಯ ಕಟ್ಟುವಂತವೇ' ಎಂದು ಮೂರು ಬಾರಿ ಹೇಳಿ ಶುಭ ಗಳಿಗೆಯಲ್ಲಿ ವರನು ವಧುವಿಗೆ ತಾಳಿ ಕಟ್ಟುವುದಾಗಿದೆ. ಈ ಸಮಯದಲ್ಲಿ ಕೊಂಬು ಕಹಳೆ ಓಲಗದ ಸದ್ದು ಮೊಳಗುವುದು.

**ವಧುವಿನ ಮನೆ ಪ್ರವೇಶ**

ಧಾರಾ ಕಾರ್ಯ ಮುಗಿದು ವಧುವಿಗೆ ತಾಳಿ ಕಟ್ಟಿದ ನಂತರ ವಧುವು ತನ್ನ ಬಲಗೈಯಲ್ಲಿ ವರನ ಎಡಗೈಯನ್ನು ಹಿಡಿದು ತಾಯಿ ತಂದೆಯವರೊಂದಿಗೆ ಬಲಗಾಲು

ಮುಂದಿಟ್ಟು ಮನೆ ಹತ್ತುವುದು. ಊರು ಗೌಡರು / ಮುಖ್ಯಸ್ಥರು ಪದ್ಧತಿಯಂತೆ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ಹಸೆ ಚಾಪೆಯಲ್ಲಿ ಕೂರಿಸುವರು. ಅಲ್ಲಿಗೆ ವಧುವಿನ ತಾಯಿ ಮದುಮಕ್ಕಳಿಗೆ ಹಾಲು ತುಪ್ಪ ಕೊಡುವರು. ನಂತರ ವಧುವರರು ಎಲ್ಲಾ ಹಿರಿಯರು, ಬಂಧು ಬಳಗದ ಆಶೀರ್ವಾದ ಬೇಡುವುದು ಪದ್ಧತಿ. ಮದುಮಕ್ಕಳು ಹಿರಿಯರ ಪಾದ ಮುಟ್ಟಿ ನಮಸ್ಕರಿಸಬೇಕು.

**ಹೆಣ್ಣೊಳಿಸಿ ಕೊಡುವುದು :**

ಧಾರಾ ಕಾರ್ಯಕ್ರಮ ಮುಗಿದು ಮದುಮಕ್ಕಳು ವಧುವಿನ ಮನೆ ಪ್ರವೇಶಿಸಿ ಹಾಲು ತುಪ್ಪ ಕುಡಿದು ಹಿರಿಯ ಆಶೀರ್ವಾದ ಪಡೆದ ನಂತರ ಹೆಣ್ಣೊಳಿಸಿ ಕೊಡುವುದು ಕ್ರಮ. ಈಗ ಇಲ್ಲಿ ನೆಲ್ಲಕಿಯಿಂದ ಕೈಯಾಲೆಗೆ ಬರುವ ಸಮಯದಲ್ಲಿ ವಧುವಿನ ಕಡೆಯವರು ಬಾಗಿಲು ತಡೆದು ಮದುಮಕ್ಕಳಲ್ಲಿ ಹೆಣ್ಣು ಹುಟ್ಟಿದರೆ ಸೋದರಕ್ಕೆ ಕೊಡುವುದಾಗಿಯೂ ಗಂಡು ಹುಟ್ಟಿದರೆ ಸೋದರದಿಂದ ತೆಗೆದುಕೊಂಡು ಹೋಗುವುದಾಗಿಯೂ ಅವರಿಂದ ವಾಗ್ದಾನ ಮಾಡಿಸಿ ಹೆಣ್ಣೊಳಿಸಿ ಕೊಡುವುದು.

**1) ಹೆಣ್ಣು ಗಂಡು ವಹಿಸಿ ಕೊಡುವುದು :**

ಹೆಣ್ಣಿ ಕಡೆಯವರೊಬ್ಬರು ಗಂಡು ಮತ್ತು ಹೆಣ್ಣಿನ ಮಧ್ಯದಲ್ಲಿ ನಿಂತು ಹೇಳುವ ಮಾತನ್ನು ಗಂಡಿನ ಕಡೆಯ ದಿಬ್ಬಣದ ಮುಖ್ಯಸ್ಥರೆನಿಸುವವರು. ಇವರಿಗೆ ಎದುರಾಗಿ ನಿಂತು ತಮ್ಮ ವಶಕ್ಕೆ ತೆಗೆದುಕೊಳ್ಳುವುದು. ಇದು ಗೌಡ ಜನಾಂಗದಲ್ಲಿ ವಿವಾಹದಲ್ಲಿ ಹೆಣ್ಣಿನ ಮನೆಯವರಿಂದ ಗಂಡಿನ ದಿಬ್ಬಣದ ಮುಖ್ಯಸ್ಥರಿಗೆ ಗಂಡು ಮತ್ತು ಹೆಣ್ಣನ್ನು ವಹಿಸಿಕೊಡುವುದು ಎಂದು ಹೇಳುವರು.

ಹೆಣ್ಣು ವಹಿಸಿಕೊಡುವಾಗ ಹೇಳುವ ಮಾತುಗಳು.

ಹೆ.ವ. : ಹೆಣ್ಣು ವಹಿಸಿ ಕೊಡುವವರು

ದಿ.ಮು. ದಿಬ್ಬಣದ ಮುಖ್ಯಸ್ಥರು

ಹೆ.ವ. ಪರಮ ವೈಭವದಿಂದ ತಮ್ಮ ಇಷ್ಟಮಿತ್ರರಿಂದೊಡಗೂಡಿ ಪುರಷನ ಕಡೆಯಿಂದ ಆಗಮಿಸಲ್ಪಟ್ಟ ದಿಬ್ಬಣದ ಮುಖ್ಯಸ್ಥರಾದ ಮಹನೀಯರು ಯಾರಯ್ಯ ?

ದಿ.ಮು. : ನಾವಯ್ಯ

ಹೆ.ವ. : ಹಾಗಾದರೆ ನಾವು ನಮ್ಮ ಪೂರ್ವ ಪದ್ಧತಿಯಂತೆ ವಿಜ್ಞಾಪನೆಯನ್ನು ಸ್ವೀಕರಿಸಿ, ಚಂದ್ರರಾಜನೆಂಬ ಪುರಷನಿಗೆ, ಪದ್ಮಾವತಿಯೆಂಬ ಕನ್ನಿಕೆಯನ್ನು ವಧೂವರರನ್ನಾಗಿ ಮಾಡುವುದಂತ ಈ ಮೊದಲು ಮನದತ್ತ ಮಾಡಿ ಆಮೇಲೆ ವಾಗ್ದಾತ್ತ ಮಾಡೋಣಯ್ತು ಅಲ್ಲವೋ ?

ದಿ.ಮು. : ಹೌದು

ಹೆ.ವ. : ವಾಗ್ದಾತ್ತ ಮೇರೆಗೆ ನಾವು ಉಭಯಸ್ಥರು ಕೂಡಿ ಆಕಾಶವನ್ನು ದೊಡ್ಡ ಚಪ್ಪರವನ್ನು ಹಾಕಿ, ಭೂಮಿಯನ್ನು ದೊಡ್ಡ ಹಸೆಯನ್ನು ಬರೆದು ರತ್ನಖಚಿತವಾದ ಮಂಟವದಡಿಯಲ್ಲಿ, ಸಮಸ್ತ ಬಂಧು ಬಾಂಧವರ ಸಮಕ್ಷಮದಲ್ಲಿ, ಅಗ್ನಿಸಾಕ್ಷಿಯಾಗಿ ನಮ್ಮ ಕನ್ಯಾರತ್ನವನ್ನು ಧಾರೆಯರೆದು ಕೊಟ್ಟಿದ್ದೇವೆಯಷ್ಟೆ !

ದಿ.ಮು. ಹೌದು

ಹೆ.ವ. ಹಾಗಾದರೆ ನಿನ್ನೆಯ ದಿವಸ ಪುರುಷನನ್ನು ಮನ್ಮಥನಂತೆಯೂ, ಕನ್ನಿಕೆಯನ್ನು ರತಿದೇವಿಯಂತೆಯೂ ಶೃಂಗರಿಸಿದರಲ್ಲಾಗಲಿ, ರೂಪು ಲಾವಣ್ಯದಲ್ಲಾಗಲಿ, ಏನೊಂದು ಕುಂದುಕೊರತೆಯಿಲ್ಲದೆ, ಕಾಮಚಕ್ರೇಶ್ವರನನ್ನು ಹೋಲುವ ಪುರುಷನ ದ್ವಯ ಹಸ್ತಗಳಿಗೆ ಚಾರು ಹಸ್ತಗಳನ್ನಾಗಿ ಮಾಡಿದರಲ್ಲಾಗಲಿ, ಯಾವ ಲೋಪ ದೋಷಗಳು ಕಂಡುಬಂದಿಲ್ಲವಷ್ಟೇ ?

ದಿ.ಮು. ಇಲ್ಲ.

ಹೆ.ವ. : ಹಾಗಾದರೆ ನಮ್ಮ ಮುದ್ದು ಬಾಲಕಿಯನ್ನು ನಿಮ್ಮ ಸ್ವಾಧೀನಕ್ಕೆ ಒಪ್ಪಿಸಿ ಕೊಡುತ್ತೇವೆ. ಹಾಗೆ ಒಪ್ಪಿಸಿ ಕೊಡುವಾಗ ಬಾಲಕಿಗೆ ಹನ್ನೆರಡು ಹನ್ನೆರಡು ಇಪ್ಪತ್ತನಾಲ್ಕು ವರಹಗಳನ್ನೂ, ಉಡುಲು ವಸ್ತ್ರಗಳನ್ನು, ತೊಡಲು ಚಿನ್ನಾಭರಣಗಳನ್ನು, ಊಡ ಮಾಡಲು ಬೆಳ್ಳಿ ಬಟ್ಟಲನ್ನೂ, ಕೈ ತೊಳೆಯಲು ಬೆಳ್ಳಿ ಗಿಂಡಿಯನ್ನೂ ಕರೆದುಣ್ಣಲು ಗೋವಿನ ಹಿಂಡನ್ನೂ ಬಳುವಳಿಯಾಗಿ ಕೊಟ್ಟಿರುತ್ತೇವೆಯಷ್ಟೆ !

ಹೀಗೆ ನಾವು ಕೊಟ್ಟ ಅಲ್ಪ ಐಶ್ವರ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರ ಸಂಖ್ಯೆಯಲ್ಲಿ ಅಭಿವೃದ್ಧಿ ಮಾಡಿ ಕೀರ್ತಿಗಳಿಸುವಂತೆ ಮಾಡುವ ಖ್ಯಾತಿವಂತ ಮಹಾಶಯರು ಯಾರಯ್ಯ ?

ದಿ.ಮು. ವರನಯ್ಯ

ಹೆ.ವ. ನಮ್ಮ ಬಾಲಕಿಗೆ ಕಡೆ ಹಲ್ಲು ಬರಲಿಲ್ಲ, ನೆತ್ತಿ ಎಣ್ಣೆ ಅರಲಿಲ್ಲ, ಅಂಗೈ ಬರೆ ಮಾಜಲಿಲ್ಲ, ಬುದ್ಧಿ ಜ್ಞಾನ ಬರಲಿಲ್ಲ. ಹೆತ್ತ ತಂದೆ ತಾಯಿಯರ ಮರೆಯಲಿಲ್ಲ. ಹಸಿ ಕಡಿಯಲರಿಯಳು, ಒಣಗಿಲು ಮುರಿಯಲರಿಯಳು, ಬೀಸಿ ಗುಡಿಸಲರಿಯಳು. ಹಾಸಿಗೆ ಹಾಸಲರಿಯಳು, ಅಂಗಳದಲ್ಲಿ ಆಡಿ, ಹಾಲನ್ನು ಉಂಡು, ಮೆಟ್ಟಲಲ್ಲಿ ಓಡಿ ತೊಟ್ಟಿಲಲ್ಲಿ ಮನಗಬೇಕೆಂದು ಇಚ್ಛಿಸುವ ಮದ್ದು ಬಾಲಕಿಗೆ ತಕ್ಕ ಬುದ್ಧಿವಾದವನ್ನು ಬೋಧಿಸುವಂತಹ ಬೋಧಕರು ಯಾರಯ್ಯ ?

ದಿ.ಮು. : ವರನ ಹಿರಿಯರಯ್ಯ.

ಹೆ.ವ. : ನಮ್ಮ ಬಾಲಕಿಯು ಚಿಕ್ಕದಾಗಿರುವ ಕಾಲದಿಂದಲೂ ಮಾವನವರ ಮನಗುಣವನ್ನು ಅರಿಯಳು. ಅತ್ತೆಮ್ಮನವರ ಅಡುಗೆ ಕೆಲಸ ತಿಳಿಯಲಿಲ್ಲ. ಬಾವ ಮೈದುನರ ಭಾವನೆ ಗೊತ್ತಿಲ್ಲ, ಅಕ್ಕ ತಂಗಿಯರ ಹಂಗಿಗೆ ಒಳಪಟ್ಟವಳಲ್ಲ, ಕುಟುಂಬದ ಕೂಟಕ್ಕೆ ಕೂಡಿದವಳಲ್ಲ, ಹೀಗಿರುವಾಗ ತನ್ಮಧ್ಯೆ ಏನಾದರೂ ಮಾತಿನಲ್ಲಿ ಕಲಹಗಳು ಉಂಟಾದರೆ ಇಂತಹ ಕಲಹಗಳನ್ನು ಉಪಶಮನ ಮಾಡುವಂತಹ ಉಪಶಮಕರು ಯಾರಯ್ಯ ?

ದಿ.ಮು. : ವರನಯ್ಯ.

ಹೆ.ವ. ಹಾಗಾದರೆ, ದಿಬ್ಬಣದ ಮಹಾಶಯರೇ, ನಾವು ಹೇಳಿದ ಮಾತಿಗೆ ಎರಡನ್ನದೆ ನಾವು ಕೊಡುವ ಕನ್ಯಾರತ್ನವನ್ನು ಭಕ್ತವತ್ಸಲನು ಭಕ್ತರನ್ನು ಪ್ರೀತಿಸುವಂತೆಯೂ, ನರಹರಿಯು ಕೂರ್ಮುಗಳನ್ನು ಕಾಯುವಂತೆಯೂ, ಹಸು ತನ್ನ ಎಳೆಗರುವನ್ನು ಪ್ರೀತಿಸುವಂತೆಯೂ, ಪ್ರೀತಿಸುವಿರೆಂಬುದಾಗಿ ಅಗ್ನಿಸಾಕ್ಷಿಯಾಗಿ ನಾವು ನಂಬುತ್ತೇವೆ. ಇನ್ನು ಮುಂದೆ ಈ ನವದಂಪತಿಯನ್ನು ಭಕ್ತವತ್ಸಲನು ನಾಭಿಕಮಲದಲ್ಲಿ ಬ್ರಹ್ಮನಿಗೆ ಸ್ಲಾದವಿತ್ತವನಾದ ಆ ಕ್ಷೀರಶಯನ ಶ್ರೀಮನ್ನಾರಾಣನೇ ಕಾಪಾಡಲೆಂದು ನಾವೆಲ್ಲರೂ ವಂದಿಸೋಣ.

'ಹತ್ತು ಕುಟುಂಬ ಹದಿನೆಂಟು ಗೋತ್ರ ಸಂಸಾರ ಸಂಗಡ ಕೇಳಿ ಕುಲಸ್ಥರ ಸಭೆಯಲ್ಲಿ ಸಮಸ್ತರ ಸಂಗಡ ಕೇಳಿ ಹೆಣ್ಣು ಗಂಡನ್ನು ದಿಬ್ಬಣದ ಮುಖಸ್ಥರಿಗೆ ವಹಿಡಿಕೊಡವಂತೆವೇ ಎಂದು ಮೂರು ಬಾರಿ ಹೇಳಿ ಹೆಣ್ಣು ಗಂಡನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿಕೊಡುವರು. ಒಡನೆಯೇ ಒಲಗದವರು ವಾದ್ಯ ಮಾಡುವರು.

ಹೆಣ್ಣು ಸಿಕ್ಕಿದ ಶುಭ ಸಂಕೇತವಾಗಿ ದಿಬ್ಬಣದ ಕಡೆಯವರು ತಮ್ಮ ಸಂತೋಷ ವ್ಯಕ್ತಪಡಿಲು ಕುಣಿತದೊಂದಿಗೆ ಶುಭ ಘೋಷಣೆಯನ್ನು ಮಾಡುವರು.

**2) ಹೆಣ್ಣು ಗಂಡು ವಹಿಸಿ ಕೊಡುವುದು :**

ಹೆ.ಕ. : ಹೆಣ್ಣಿನ ಕಡೆಯವರು ಗಂ.ಕ. : ಗಂಡಿನ ಕಡೆಯವರು.

ಹೆ.ಕ. : ದಿಬ್ಬಣದ ಮುಖ್ಯಸ್ಥರು ಯಾರಯ್ಯ ?

ಗಂ.ಕ. : ನಾವಯ್ಯ

ಹೆ.ಕ. : ಯಾವ ನಾಡು, ಯಾವ ಊರು, ಯಾವ ಮನೆಯವರು

ಗಂ.ಕ : (ಸೂಕ್ತವಾದ ಪರಿಚಯ ಹೇಳುತ್ತಾರೆ.)

ಹೆ.ಕ. : ಸಭಿಕ್ಯರೇ, ನಾನು ಹೇಳುವ ಮಾತುಗಳನ್ನು ನೀವುಗಳು ಕೇಳಿಕೊಂಡು ತಪ್ಪುಗಳಿದ್ದರೆ ಮನ್ನಿಸಿ, ಭಾಗ್ಯಸಂಪನ್ನರಾದ ಮತ್ತು ಮಹಾನುಭಾವರಾದ ನೀವುಗಳು ನನಗೆ ತಿಳಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಅಯ್ಯಾ, ನಮ್ಮ ಕನ್ಯೆಯು ಹಾಲು ಅನ್ನವನ್ನು ಊಟ ಮಾಡಿಕೊಂಡು ತೂಗು ಮಂಚದ ಹಾಸಿಗೆಯ ಮೇಲೆ ಮಲಗಿ, ಶರೀರವನ್ನು ಯಾವಾಗಲೂ ಅಲಂಕರಿಸಿಕೊಂಡು ಕಷ್ಟ ಸುಖಗಳನ್ನರಿಯದೆ ಸುಖ ಸಂಪತ್ತಿನಿಂದ ಬಾಳುತ್ತಿದ್ದು, ಜನಕರಾಯನಲ್ಲಿ ಸೀತಾದೇವಿಯು ಮೆರೆಯುತ್ತಿದ್ದಂತೆ ತನ್ನ ತಂದೆ ತಾಯಿಯರ ಮನಸನ್ನು ಸಂತೋಷಗೊಳಿಸುತ್ತಾ ಕತ್ತಲೆಯ ಹೊತ್ತಿನಲ್ಲಿ ಭೂವಿಗೆ ಚಂದ್ರನು ಹೀಗೆ ಪ್ರಕಾಶವನ್ನು ಕೊಡುತ್ತಿರುವನೋ ಅದೇ ರೀತಿಯಲ್ಲಿ ತನ್ನ ಕುಟುಂಬಕ್ಕೆ ಸಂತೋಷವನ್ನು ಕೊಡುತ್ತಿದ್ದಳು. ಆದರೆ ಋಷ್ಯಾಶ್ರಮದಲ್ಲಿ ಶ್ರೀರಾಮನು ವಿದ್ಯಾಶಾಸ್ತ್ರಗಳನ್ನು ಕಲಿತು ದಿವ್ಯಸಂಪನ್ನರಾಗಿ ಮೆರೆಯುತ್ತಿದ್ದಂತೆ ಇರುವ ನಿಮ್ಮ ಬಾಲಕನಿಗೆ ನಮ್ಮ ಕನ್ನಿಕೆಯನ್ನು ಕೊಡಬೇಕೆಂದು ನಾವು ಉಭಯ ಕಡೆಯವರೂ ಕೂಡಿ ಜಾತಕ, ಕೂಟ ಮುಹೂರ್ತವನ್ನು ನೋಡುವಂತೆ ಬ್ರಾಹ್ಮಣರನ್ನು ಆಳುಬಿಟ್ಟು ಕರೆಯಿಸಿ, ನಮ್ಮ ನಾಲ್ಕು ಕಟ್ಟುಮನೆ ಕಯ್ಯಾಲೆ, ಬಾಡೆಯಲ್ಲಿ ಚಿನ್ನದ ಚಾಪೆ ಹಾಕಿ, ಸಣ್ಣಕ್ಕಿ ತುಂಬಿದ ತಟ್ಟೆ ಮೇಲೆ ನಂದಾದೀವಿಗೆಯನ್ನು ಇರಿಸಿ, ಜಾತಕ, ಗಣಕೂಟ ಮುಹೂರ್ತವನ್ನು ನೋಡಿದಲ್ಲು, ನಮ್ಮ ಹೆಣ್ಣಿಗೂ ನಿಮ್ಮ ಗಂಡಿಗೂ ಸುಖಸಂಪನ್ನರಾಗಿ ಬಾಳುವ ಯೋಗವಿದ್ದುದರಿಂದ ನಾವುಗಳು ಬಂಧುಮಿತ್ರರಿಗೆ ಹೇಳಿ ಕಳುಹಿಸಿಯೂ ಕಾಗದ

ಪತ್ರಗಳಿಂದ ಕರೆಯಿಸಿಯೂ ನಿಮ್ಮ ಭವನದಿಂದ ನಮ್ಮ ಭವನಕ್ಕೆ ದಿಬ್ಬಣಾಡಿ ಬಂದಿದ್ದೀರಿ.

ಗಂ.ಕ. : ಹೌದು

ಹೆ.ಕ. : ಆದರೆ, ನಿಮ್ಮ ಬಾಲಕನಿಗೆ ಸಾವಿರಾರು ವರಹದ ಚಿನ್ನಾಭರಣಗಳಿಂದ ಅಲಂಕರಿಸಿ ನಮ್ಮ ಸ್ವಾಧೀನಕ್ಕೆ ಕೊಟ್ಟ ಮೇಲೆ ನಮ್ಮ ಮನೆದೇವರ ಅನುಗ್ರಹದಿಂದಲೂ, ಮಹಾನುಭಾವರಾದ ಸಭಿಕರ ಕರುಣಾಕಟಾಕ್ಷದಿಂದಲೂ ಇದೇ ಭವನದ ಮುಂದುಗಡೆಯಲ್ಲಿ ಹಾಕಿರುವ ಹನ್ನೆರಡು ಕಂಬಗಳ ಕಯ್ಯಾಲೆ ಚಪ್ಪರದ ಮೇಲ್ಕಟ್ಟಡಿಯಲ್ಲಿ ನಾವುಗಳು ಅಂದರೆ ಉಭವ ಕಡೆಯವರು ಸಾಲುಕಟ್ಟಿ ನಿಂತು ಕನ್ಯೆ ಕೈ ಧಾರೆ ವೃತಗಳನ್ನು ಮಾಡಿ, ನೀವು ತಂದಿರುವ ದ್ವಯಹಸ್ತಗಳನ್ನು ಚತುರ್ಹಸ್ತಗಳನ್ನಾಗಿ ಮಾಡಿರುತ್ತೇವೆ.

ಗಂ.ಕ. : ಹೌದು

ಹೆ.ಕ.: ಆದರೆ, ರೂಪದಲ್ಲಿ ಮನ್ಮಥನಿಗೆ ಹೋಲುವ ನಿಮ್ಮ ಪುರುಷನು ನಮ್ಮ ಕನ್ಯೆಯನ್ನು ದೇವತಾ ಸಾಕ್ಷಿಯಾಗಿ ಪಾಣಿಗ್ರಹಣ ಮಾಡಿಲ್ಲವೋ?

ಗಂ.ಕ. : ಹೌದು

ಹೆ.ಕ. : ಆದರೆ, ನಮ್ಮ ವರ್ಣಾಶ್ರಮದ ಧರ್ಮಕ್ಕನುಸಾರವಾಗಿಯೂ, ಕಾರ್ಯಕ್ರಮವಾಗಿಯೂ ನಡೆದ ಪಾಣಿಗ್ರಹಣ ಸಂಸ್ಕರಣಗಳಲ್ಲಿ ಅನೇಕ ವಿಷಯಗಳಲ್ಲಿ ತಪ್ಪು ನೆಪ್ಪುಗಳು ಕುಂದುಕೊರತೆಗಳು ಬಂದಿರಬಹುದು. ಇಂತಹ ನ್ಯೂನತೆಗಳನ್ನು ಮಹಾನುಭಾವರಾದ ಸಭಿಕರು, ಕರುಣಾಸಾಗರನಾದ ಭಗವಂತನಲ್ಲಿ ಕ್ಷಮಿಸಬೇಕೆಂದು ಕೇಳಿ ದೇವತಾಸಾಕ್ಷಿಯಾಗಿ ಕನ್ಯಾದಾನ ಮಾಡಿದ್ದೇವೆಯಲ್ಲವೋ.

ಗಂ.ಕ. : ಹೌದು

ಹೆ.ಕ. : ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಪತಿಯೂ, ವೃದ್ಧಾಪ್ಯದಲ್ಲಿ ಸುತರೂ, ರಕ್ಷಿಸಬೇಕೆಂಬ ಲೌಕಿಕ ಧರ್ಮಕ್ಕನುಸಾರವಾಗಿ ಕನ್ಯಾದಾನ ಮಾಡಿದ್ದಾಗಿಯೂ, ನಮ್ಮ ಪೂರ್ವ ಪದ್ಧತಿ ಪ್ರಕಾರ ಹೆಣ್ಣು, ಗಂಡು ವಹಿಸಿಕೊಂಡವು ಪದ್ಧತಿ ಇರುವುದಲ್ಲವೋ ?

ಗಂ.ಕ : ಹೌದು

ಹೆ.ಕ. : ನಿಮ್ಮ ದಿಬ್ಬಣಗಳಲ್ಲಿ ಪ್ರಮುಖರಾದವರು ಮತ್ತು ಒಟ್ಟಾರೆ ಕುಲಸ್ಥರು ಸೇರಿ ಏನೊಂದು ಕುಂದುಕೊರತೆ ಇಲ್ಲದಂತೆ ನಡೆಯಿಸಿಕೊಡಬೇಕೆಂಬುದು ನಮ್ಮ ಅರಿಕೆಯಾಗಿದೆ.

ನಮ್ಮ ಕನ್ನಿಕೆಯ ನೆತ್ತಿ ಎಣ್ಣೆ ಆರಲಿಲ್ಲ, ಅಂಗೈ ಬರೆ ಮಾಜಲಿಲ್ಲ, ಅಂಗಾಲಿಗೆ ಧೂಳು ಸೋಕಲಿಲ್ಲ, ಮೃದುವಾದ ಬಾಲ್ಯ ಭಾಷೆಗಳಿಂದಲೂ ಆಟಪಾಠಗಳಿಂದಲೂ ತಂದೆ ತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ ಬಾಲ್ಯಾವಸ್ಥೆಯನ್ನು ಮೀರದ ನಮ್ಮ ಮುದ್ದು ಬಾಲಕಿಯನ್ನು ಯಾವ ರೀತಿ ಸಾಕುವಿರಯ್ಯಾ?

ಗಂ.ಕ : (ಮೌನವಾಗಿ ನಿಂತುಕೊಳ್ಳುವರು)

ಹೆ.ಕ. : ನಮ್ಮ ಹೆಣ್ಣು ಮಾವನ ಗುಣವನ್ನು ಅರಿಯಳು, ಅತ್ತೆಯ ಅತಿಶಯವನ್ನು ತಿಳಿಯಳು, ಸಖಿಯರ ಗುಣದೋಷಗಳನ್ನು ಗ್ರಹಿಸಲೂ, ನಿರಂತರವೂ ಸೂರ್ಯನನ್ನು ಬಯಸುವ ತಾವರೆಯಂತೆಯೂ, ಚಂದ್ರನನ್ನು ನೆನೆಯುವ ನೈದಿಲೆಯಂತೆಯೂ, ಮಳೆಗಾಲವನ್ನು ಬಯಸುವ ಮತ್ಸ್ಯ ಕುಲದಂತೆಯೂ. ಕಾರ್ಮುಗಿಲನ್ನು ಬಯಸುವ ಬೆಳ್ಳಕ್ಕಿಯಂತೆಯೂ, ಮೇಘದೊಡನೆಗೆ ಆಸೆಪಟ್ಟು ಪಂಪಾಸಾಗರದಲ್ಲಿ ತೇಲಾಡುತ್ತಿರುವ ಹಂಸದಂತೆ ಇರುವ ನಮ್ಮ ಮುದ್ದು ಬಾಲಕಿಯನ್ನು ರಕ್ಷಿಸಿಕೊಳ್ಳುವವರಾರಯ್ಯ ?

ಗಂ.ಕ. : ವರನಯ್ಯ

ಹೆ.ಕ. : ನಮ್ಮ ಹೆಣ್ಣು ಸೂರ್ಯದೇವನಿಗೆ ಛಾಯದೇವಿ ಹೇಗೋ, ಚಂದ್ರನಿಗೆ, ರೋಹಿಣಿದೇವಿ ಹೇಗೋ ವಶಿಷ್ಠನಿಗೆ ಅರುಂದತಿ ಹೇಗೋ, ಅಧಿಸೇನನಿಗೆ ಅನುಸೂಯದೇವಿ ಹೇಗೋ, ಸತ್ಯವಂತನಿಗೆ ಸಾವಿತ್ರಿದೇವಿ ಹೇಗೋ, ಶ್ರೀ ರಾಮಚಂದ್ರನಿಗೆ ಜಾನಕಿದೇವಿ ಹೇಗೋ ಹಾಗೆಯೇ ವಸಂತನಿಗೆ ತಂಗಾಳಿ ಬೀಸಿದಂತೆ, ಮನ್ಮಥನ ಮುಂದೆ ರತಿದೇವಿ ಸೇರಿದಂತೆ ಈ ದಂಪತಿಗಳಲ್ಲಿ ಭಿನ್ನಭೇದ ಬಾರದಂತೆ ಹಿತೋಪದೇಶಗಳನ್ನು ಹೇಳಿ ಸರಿಪಡಿಸಿಕೊಳ್ಳುವವರಾರಯ್ಯ ?

ಗಂ.ಕ. : ವರನ ಹಿರಿಯರು.

ಹೆ.ಕ. : ನಮ್ಮ ಹೆಣ್ಣಿಗೆ ಊಟ ಮಾಡುವುದಕ್ಕೆ ಗಂಗಳವನ್ನೂ, ಕೈ ತೊಳೆಯುವುದಕ್ಕೆ ತಂಬಿಗೆಯನ್ನೂ, ಮಲಗುವುದಕ್ಕೆ ಯೋಗ್ಯವಾದ ರತ್ನ ಖಚಿತವಾದ ಮಂಚವನ್ನೂ, ಕರೆಯುವುದಕ್ಕೆ ಯೋಗ್ಯವಾದ ಗೋವಿನ ಹಿಂಡನ್ನೂ, ಉಡಿಗೆ,

ತೊಡಿಗೆಗಳನ್ನು ಕೊಟ್ಟಿದ್ದಲ್ಲದೆ, ದ್ರವ್ಯವನ್ನೂ ಸಹ ಬಳುವಳಿಯಾಗಿ ಕೊಟ್ಟಿರುತ್ತೇವೆ. ಹೀಗೆ ಬಳುವಳಿಯಾಗಿ ಕೊಟ್ಟ ದ್ರವ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರಗಟ್ಟಲೆ ವೃದ್ಧಿಪಡಿಸಿ ಕೊಡುವವರು ಯಾರಯ್ಯಾ ?

ಗಂ.ಕ. : ವರನಯ್ಯ

ಹೆ.ಕ. : ಅಯ್ಯ, ಮಹಾಶಯರೇ, ಬಾಲ್ಯಾವಸ್ಥೆಯಲ್ಲಿರುವ ನಮ್ಮ ಕನ್ನಿಕೆಯ ಅತ್ತೆ ಎಂಬ ಮಾತಿಗೆ ತಾಯಿ ಎಂತಲೂ, ಮಾವ ಎಂಬ ಶಬ್ದಕ್ಕೆ ತಂದೆ ಎಂತಲೂ ಪತಿ ಎಂಬ ವಚನಕ್ಕೆ ಗತಿ ಎಂತಲೂ ತಿಳಿದಿರುವಳು. ನಾವು ಕನ್ಯಾದಾನ ಮಾಡಿದ್ದಾಗೂ, ಈ ದಂಪತಿಗಳು ಮಹಾನುಭಾವರಾದ ಸಭಿಕರ ಕರುಣಾಕಟಾಕ್ಷದಿಂದಲೂ, ದಯಾಸಾಗರನಾದ ಪರಮಾತ್ಮನ ಅನುಗ್ರಹದಿಂದಲೂ, ಪುತ್ರ, ಪೌತ್ರ, ಪೌಪುತ್ರ ವಂಶಾಭಿವೃದ್ಧಿಯಾಗಿ ಬಾಳಲೆಂದೂ ಸರ್ವ ಸಂಪನ್ನ ಭಾಗ್ಯ ಸಮೃದ್ಧರಾಗಿಯೂ ಧೀರ್ಘಾಯುಷ್ಯವಂತರಾಗಿಯೂ ಬಾಳಲೆಂದು ಚಂದ್ರಶೇಖರನಾದ ಶ್ರೀ ಅಂಬಾಧರನಾದ ಬಾಲಗಂಗಾಧರನಾದ ಫಾಲ ನೇತ್ರವಾದ ಪಾರ್ವತಿರಮಣನು ಅನುಗ್ರಹಿಸಲಿ. ಅಲ್ಲದೆ ಬೆಳಗ್ಗಿನ ಜಾವದಲ್ಲಿ ಬೆಳ್ಳಕ್ಕಿಯಂತೆ ಪ್ರಕಾಶಿಸುವ ಕುಂಭಿನಿ ಕಾಂತೆಯಳಂತೆ, ಸಂಧ್ಯಾರಾಗದಂತೆ, ಬಾಲಸೂರ್ಯನಂತೆ, ಹೊಳೆಯುವ ನವರತ್ನ ಕಿರೀಟಗಳಂತೆ ಪ್ರಜ್ವಲಿಸುವ, ಉದಯ ಪರ್ವತವನ್ನು ಹೋಲುವ ಸಿದ್ಧಿವಿಘ್ನೇಶ್ವರನು ವರ ಸೌಭಾಗ್ಯವನ್ನು ದಯಾಪಾಲಿಸಲಿ. ಅಲ್ಲದೇ ಅಹಿಣಿ ಮಹಿಣಿಯಾದ ಮಂಗಳ ದೂರ್ಘಂಟಿಯ ದಯೆಯಿಂದ ಈ ದಂಪತಿಗಳು ಆಯುರಾರೋಗ್ಯ ಸುಖ ಸಂಪನ್ನರಾಗಿ ಬಾಳಲೆಂದು ನಾವುಗಳೆಲ್ಲರೂ ಭಗವಂತನನ್ನು ಕುರಿತು ಪ್ರಾರ್ಥಿಸುವ.

ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ಥರ ಸಭೆ ಸಮಸ್ತರ ಸಂಗಡ ಕೇಳಿ ಈ ನವದಂಪತಿಗಳನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿಕೊಡುವಂತೆವೇ...

ಸಭಿಕರೆಲ್ಲರೂ ಒಳ್ಳೆ ಕಾರ್ಯವಂತೆವೇ ಎಂಬ ಘೋಷಣೆ ಕೂಗುವರು.

**ಪಟ್ಟೆ ವೀಳ್ಯ ಕೊಡುವುದು :**

ವರನ ಕಡೆಯ ದಿಬ್ಬಣದ ಮುಖ್ಯಸ್ಥರು ಹೆಣ್ಣು ಗಂಡು ವಹಿಸಿಕೊಂಡ ನಂತರ ವರನ ಮನೆಯಲ್ಲಿ ನಡೆಯತಕ್ಕ ನಾಗೋಳಿ ಶಾಸ್ತ್ರಕ್ಕೆ ಹೆಣ್ಣಿನ ಕಡೆಯವರನ್ನು

ಆಹ್ವಾನಿಸುವುದು ಕ್ರಮ. ಇಲ್ಲಿ ದಿಬ್ಬಣದ ಮುಖ್ಯಸ್ಥರು ಮದು ಮಕ್ಕಳ ಕೈಯಿಂದ ಎರಡು ಎಲೆಯ ಪಟ್ಟಿ ವೀಳ್ಯವನ್ನು ಹೆಣ್ಣಿ ಕಡೆಯವರಿಗೆ ಕೊಡಿಸಿ ಪಾದ ನಮಸ್ಕಾರ ಮಾಡಿಸುವರು. ದಿಬ್ಬಣದ ಮುಖ್ಯಸ್ಥರು ಕೂಡಾ ವಧುವಿನ ಒಕ್ಕಲೆಜಮಾನರಿಗೆ, ಊರು ಗೌಡರಿಗೆ / ಮುಖಸ್ಥರಿಗೆ, ಸೋದರ ಮಾವನಿಗೆ, ಅಂತೆಯೇ ಅಕ್ಕಂದಿರಿಗೆ ವೀಳ್ಯ ಕೊಟ್ಟು ನಾಗೋಳಿ ಶಾಸ್ತ್ರಕ್ಕೆ ಆಹ್ವಾನಿಸುತ್ತಾರೆ.

**ಉಪಹಾರ ಕೊಡುವುದು :**

ದಿಬ್ಬಣವು ಸ್ವಲ್ಪ ದೂರ ಹೋದ ಬಳಿಕ ದಿಬ್ಬಣವನ್ನು ಕುಳಿತುಕೊಳ್ಳಿಸಿ ಅವರಿಗೆ ಉಪಹಾರವನ್ನು ಕೊಡುವರು. ದಿಬ್ಬಣದ ಮುಖ್ಯಸ್ಥರು ಇತರರು ಹೆಣ್ಣಿನ ಮನೆಯವರಿಗೆ ನಮಸ್ಕಾರ ಹೇಳಿ ಅವರು ಬಂದ ಕಾರ್ಯವನ್ನು ಸಾಂಗವಾಗಿ ನೆರವೇರಿಸಿ ಕೊಟ್ಟದಕ್ಕೆ ಧನ್ಯವಾದ ಅರ್ಪಿಸಿ ಪ್ರೀತಿಯ ಮಾತುಗಳನ್ನಾಡಿ ಸಂತೋಷದಿಂದ ದಿಬ್ಬಣವು ವರನ ಮನೆಯ ಕಡೆಗೆ ತೆರಳುವುದು. (ಈ ಸಮಯದಲ್ಲಿ ಕೆಲವರು ತುಪ್ಪದ ಶಾಸ್ತ್ರವನ್ನು ಮುಗಿಸಿಬಿಡುವರು) ಬಂದು ಹೋಗಿ ಆಗುವ ಬಹಳಷ್ಟು ಖರ್ಚಿನ ಬಗ್ಗೆ, ಇಲ್ಲವೇ ಬಹುದೂರದ ನೆಂಟಸ್ಥನವಾದರೆ, ಅನುಕೂಲಕ್ಕೆ ತಕ್ಕಂತೆ ಮಾಡುವರು. ದಿಬ್ಬಣವು ಹೊರಟ ಒಡನೆ ವಧುವರರು ತುಪ್ಪದ ಚೆಂಬನ್ನು ಜೋಡು ತಂಗಿನಕಾಯಿಯನ್ನು ಹಿಡಿದುಕೊಂಡು ಧಾರೆ ಸೀರೆ ಬದಲಿಸಿದ್ದಲ್ಲಿ ಧಾರೆ ಸೀರೆಯನ್ನು ಹೆಗಲಿಗೆ ಹಾಕಿಕೊಂಡು ವಧುವರರು ಮನೆ ಹತ್ತುವುದು. ಆಗ ಚಪ್ಪರದ ಹೆಬ್ಬಾಗಿಲಿನಲ್ಲಿ ಆರತಿ ಬೆಳಗಿ ತಂದೆ ತಾಯಿ ಮದುಮಕ್ಕಳನ್ನು ಬರಮಾಡಿಕೊಂಡು ತುಪ್ಪವನ್ನು ತೆಂಗಿನಕಾಯಿನ್ನು ನೆಲ್ಲಕ್ಕಿ ಅಡಿಯಲ್ಲಿ ಇಟ್ಟು ಅಲ್ಲಿರುವ ಮುಖ್ಯಸ್ಥರು ತುಪ್ಪವನ್ನು ನೋಡಿ, ದೇವರಿಗೆ ಉರುಸಿ, ತುಪ್ಪದ ಶಾಸ್ತ್ರವನ್ನು ಮುಗಿಸಿ ಬೀಳ್ಕೊಡುವರು. ಒಡನೆ ಹಿಂತಿರುಗುವುದು.

**ವರನ ಮನೆಯಲ್ಲಿ :**

ವಧುವಿನ ಮನೆಯಿಂದ ಹೊರಟ ದಿಬ್ಬಣವು ವರನ ಮನೆಯ ಚಪ್ಪರದ ಅಡಿಗೆ ಬಂದಾಗ ವರನ ಮನೆಯಲ್ಲಿ ಮುತ್ತೈದೆಯರು, ಮದುಮಕ್ಕಳಿಗೆ ಆರತಿ ಮಾಡಿ ಮನೆ ಹತ್ತಿಸಿಕೊಳ್ಳುತ್ತಾರೆ. ಇಲ್ಲಿ ವರನು ವಧುವಿನ ಕೈ ಹಿಡಿದು ಮೊದಲು ಬಲಗಾಲನ್ನು ಇಟ್ಟು ಮನೆ ಹತ್ತಿ ನೇರ ನೆಲ್ಲಕ್ಕಿ ಅಡಿಗೆ ಕರೆ ತಂದು 'ಹತ್ತು ಕುಟುಂಬ

ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ಕಂಚಿಮಿಯನ್ನು ಇಟ್ಟು ಮದುಮಕ್ಕಳನ್ನು ಹಸೆಗೆ ಸರಿಯಾಗಿ ಕೂರಿಸುತ್ತಾರೆ. ನೆಲ್ಲಕ್ಕಿ ಅಡಿಯಲ್ಲಿ ಕುಳಿತ ಮದುಮಕ್ಕಳಿಗೆ ವರನ ತಾಯಿ ಹಾಲು ಕೊಡುವರು. ಅಲ್ಲಿ ಅವರ ಮತ್ತು ಹಿರಿಯರ ಪಾದ ಮುಟ್ಟಿ ಆಶೀರ್ವಾದ ಪಡೆಯುವುದು. ಮಡಿಲಕ್ಕಿಯನ್ನು ಸಹ ಬಿಚ್ಚಿ ನೆಲ್ಲಕ್ಕಿ ಅಡಿಯಲ್ಲಿ ಇಡುವುದು.

**ಸೋದರ ಮರ್ಯಾದೆ :**

ಮಹೂರ್ತದ ದಿನ ವಧುವಿನ / ವರನ ಮನೆಯಲ್ಲಿ ವರನ ಸೋದರದವರನ್ನು ವಾದ್ಯಗೋಷ್ಠಿಯಲ್ಲಿ ಬರಮಾಡಿಕೊಂಡು ಮನೆ ಹತ್ತುವುದಕ್ಕೆ ಮುಂಚಿತವಾಗಿ ನೀರು ತಾಂಬೂಲ ಫಲಹಾರ ಕೊಟ್ಟು ಸತ್ಕರಿಸಿ ವಿವಾಹದ ಮನೆಗೆ ಗೌರವದಿಂದ ಬರಮಾಡಿಕೊಳ್ಳುವುದು.

**ದಂಪತಿ ಮುಹೂರ್ತ:**

ವರನ ಮನೆಯಲ್ಲಿ ಹೆಚ್ಚಿನ ಭಾಗ ದಂಪತಿ ಮುಹೂರ್ತವಾಗಿರುತ್ತದೆ. ಇಬ್ಬರನ್ನು ಒಟ್ಟಿಗೆ ಮೇಲ್ಕಟ್ಟಿನಡಿಯಲ್ಲಿ 'ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ಊರು ಗೌಡರು / ಮುಖಸ್ಥರು ಮುಹೂರ್ತಕ್ಕೆ (ಶೇಷೋಪಚಾರ) ಕುಳಿತುಕೊಳ್ಳುವರು. ಮೊದಲು ವರನ ತಂದೆ ತಾಯಿ ಮೇಲ್ಕಟ್ಟಿನಡಿಯಲ್ಲಿ ಇರುವ ತೂಗುದೀಪಕ್ಕೆ ಅಕ್ಕಿ ಹಾಕಿ ವಧುವರರಿಗೆ ಶೇಷೆ ಅಕ್ಕಿ ಹಾಕಿದ ನಂತರ ಎಲ್ಲಾ ನೆಂಟರಿಷ್ಟರು ಬಂಧುಬಾಂಧವರು, ಊರಿನವರು ಮದುಮಕ್ಕಳ ತಲೆಗೆ ಅಕ್ಕಿ ಹಾಕಿ 'ಆಯುರಾರೋಗ್ಯ ಸುಖ ಸಂಪನ್ನರಾಗಿ ಪುತ್ರಕಳತ್ರ ವಂಶಾಭಿವೃದ್ಧಿಯಾಗಿ ದೀರ್ಘಾಯುಷ್ಯರಾಗಿ ಬಾಳಿರಿ' ಎಂದು ಮನಸಾರೆ ಹರಿಸಿ ಅಕ್ಕಿ ಹಾಕುವರು ಮತ್ತು ತಮ್ಮ ಉಡುಗೊರೆಗಳನ್ನು ಕೊಡುವರು.

ನಂತರ ಒಕ್ಕಲೆಜಮಾನರು ಒಂದು ಚೆಂಬು ನೀರು ಹಿಡಿದು ಸಭೆಯ ಸರ್ವರನ್ನು ಊಟಕ್ಕೆ ಆಮಂತ್ರಿಸುವರು. ಊಟವಾದ ನಂತರ ನಾಗೋಳಿ ಶಾಸ್ತ್ರ

**ಮರು ದಿಬ್ಬಣ :** ವಧುವಿನ ಮನೆಯವರಿಗೆ ವರನ ಮನೆಯಲ್ಲಿ ನಡೆಯುವ ನಾಗೋಲಿ ಶಾಸ್ತ್ರಕ್ಕೆ ಪಟ್ಟಿ ವೀಳ್ಯ ಕೊಟ್ಟು ದಿಬ್ಬಣ ಹೊರಟ ಒಡನೆ ವಧುವಿನ ಕಡೆಯವರು ಕೂಡಾ ಸ್ವಲ್ಪ ಜನಗಳು ಸೇರಿ ವರನ ಮನೆಗೆ ಇವರ ಕಾರ್ಯಕ್ರಮಗಳಲ್ಲಿ

ಭಾಗವಹಿಸುವುದಕ್ಕೆ ಬರುವರು. ಇದಕ್ಕೆ ಮರು ದಿಬ್ಬಣ ಬರುವುದು ಎಂದು ಹೇಳುವರು. ಮರು ದಿಬ್ಬಣದವರನ್ನು ವಾದ್ಯಗೋಷ್ಠಿಯಲ್ಲಿ ಬರಮಾಡಿಕೊಂಡು ನೀರು, ವೀಳ್ಯ ಕೊಟ್ಟು ಸತ್ಕರಿಸುವುದು. ನಂತರ ವರನ ಮನೆಯಲ್ಲಿ ನಡೆಯುವ ಶೇಷೋಪಚಾರ ಮತ್ತು ನಾಗೋಳಿ ಶಾಸ್ತ್ರಗಳಲ್ಲಿ ಭಾಗವಹಿಸಿ ಹಿಂತಿರುಗುವುದಾಗಿದೆ.

**ನಾಗೋಳಿ ಶಾಸ್ತ್ರ :**

ಮುಹೂರ್ತದಿಂದ ಏಳಿಸುವಾಗಲೂ ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ಏಳಿಸಿ ನೆಲ್ಲಕ್ಕಿ ಅಡಿಗೆ ಕರೆ ತಂದು ಅವರಿಗೂ ಊಟೋಪಚಾರ ಕೊಟ್ಟು (ಮುಹೂರ್ತ ಮಣಿ (ಕಾಸ್ತಾಳಿ) ಕಟ್ಟಿದಲ್ಲಿಂದ ಹಿಡಿದು ಮುಹೂರ್ತ ಮಣಿ ಬಿಚ್ಚುವಲ್ಲಿಯ ತನಕ ಮದುಮಕ್ಕಳು ಮದ್ಯ ಮಾಂಸವನ್ನು ಉಪಯೋಗಿಸುವಂತಿಲ್ಲ.) ಮದುಮಕ್ಕಳನ್ನು ಮುಹೂರ್ತದಿಂದ ಏಳಿಸಿದ ನಂತರ ಅಡೋಳಿ ಕಂಚಿಮಿಯ ಜವಾಬ್ದಾರಿ ಮುಗಿದಂತೆ. ಇನ್ನೂ ನಾಗೋಳಿ ಶಾಸ್ತ್ರಕ್ಕೆ ತೊಡಗುವುದು. ಮೊದಲು ಮೇಲ್ಕಟ್ಟಿನಡಿಯಲ್ಲಿ ಒಂದು ಕುಕ್ಕೆಯಲ್ಲಿ ಗೋವಿನ ಸಗಣಿ ಗೊಬ್ಬರವನ್ನು ತುಂಬಿಸಿ ತಂದಿಟ್ಟಿರುತ್ತಾರೆ. ಇದರೊಂದಿಗೆ ಹಾಲೆ ಮರದ ಗೆಲ್ಲು, ಇಲ್ಲವೇ ಮಾವಿನ ಮರದ ಗೆಲ್ಲು ಸೊಪ್ಪು ಸಹಿತ ಇರುವುದು. ಈಗ ವಧುವರರು ತಮ್ಮ ಹೆಚ್ಚಿನ ಮೇಲಂಗಿಗಳನ್ನು ಕಳಚಿ (ಕೋಟು, ಪೇಟ. ಮುಸುಕಿನ ವಸ್ತ್ರ ಮೊದಲಾದವನ್ನು) ಮೇಲ್ಕಟ್ಟಿನಡಿಯಲ್ಲಿ ಇರುವ ಗೊಬ್ಬರದ ಕುಕ್ಕೆಯನ್ನು ಮೊದಲು ವಧುವು ತನ್ನ ತಲೆಗೆ ಹೊರಿಸುವುದಕ್ಕೆ ತನ್ನ ಪತಿಯನ್ನು ಕೇಳುವುದು. ಅವಳು ಗೊಬ್ಬರ ಹೊರಿಸಿ ಎಂದು ಕೇಳಿದ ನಂತರ ವರನು ಕುಕ್ಕೆಯನ್ನು ತಲೆಗೆ ಹೊರಿಸುವುದು. ವರನು ಅಲ್ಲಿಯೇ ಇರುವ ಮಾವಿನ ಗೆಲ್ಲನ್ನು ಹೆಗಲಲ್ಲಿರಿಸಿ ಗದ್ದೆಯ ಕಡೆಗೆ ಮುಂದೆ ನಡೆಯುವುದು. ಇದು ವಾದ್ಯದೊಂದಿಗೆ ಹೋಗಿ ಬೀಜ ಹಾಕುವ ತಾಯಿ ಗದ್ದೆಗೆ ಮದು ಮಗನು ಸೊಪ್ಪು ಹಾಕಿದ ನಂತರ ಅದರ ಮೇಲೆ ವಧುವು ತಾನು ಹೊತ್ತು ತಂದಿರುವ ಗೊಬ್ಬರವನ್ನು ಹಾಕುವುದು. ಬರುವಾಗ ನೀರು ತರುವುದು. ಇಲ್ಲಿಯೂ ಕೂಡಾ ನೀರು ಹೊರಿಸುವುದಕ್ಕೆ ವಧುವು ಪತಿಯನ್ನು ಕೇಳಬೇಕು. ಅವಳು ನೀರು ಹೊರುವ ಬಿಂದಿಗೆಯು ಚಿಕ್ಕದಾಗಿರಬೇಕು. ಅವಳ ಜೊತೆಯಲ್ಲಿ ಇನ್ನೆರಡು ಕನ್ಯೆಯರು ಚಿಕ್ಕ ಚಿಕ್ಕ ತಂಬಿಗೆಯಲ್ಲಿ ನೀರು ತರುವುದಾಗಿದೆ. ಮದುವಣ್ಣಿ ನೀರನ್ನು ತಲೆಗೆ ಹೊರಿಸಿದ ನಂತರ ಓಲಗದೊಂದಿಗೆ ಕುಣಿತ ಹಾಕುತ್ತಾ ಮನೆಗೆ ಸಾಗುವರು. (ವಧುವು ತನ್ನ ಮನೆಯಲ್ಲಿ ನಡೆದ ಚಪ್ಪರದ ಶಾಸ್ತ್ರದಿಂದ ಹಿಡಿದು, ವರನ ಮನೆಯಲ್ಲಿ ನಡೆಯುವ ನಾಗೋಳಿ ಶಾಸ್ತ್ರದವರೆಗೆ ಕೆಲವೊಮ್ಮೆ ಮೂರು ದಿನಗಳಾಗುವುದು ಉಂಟು. ಆಗ ಅವಳಿಗೆ ಬಹಳಷ್ಟು ಆಯಾಸವಿರುತ್ತದೆ. ಆದುದರಿಂದ ಕುಕ್ಕೆಯಲ್ಲಿ ಹೆಚ್ಚಿಗೆ ಗೊಬ್ಬರ ತುಂಬಿಸುವುದಾಗಲಿ,

ದೊಡ್ಡ ಬಿಂದಿಗೆಯಲ್ಲಿ ನೀರು ಹೊರಿಸುವುದಾಗಲಿ ಮತ್ತು ಹೆಚ್ಚು ಹೊತ್ತು ದಾರಿ ತಡೆದು ಕುಣಿಯುವುದಾಗಲಿ ಮಾಡಬಾರದು. ಏಕೆಂದರೆ ನೀರು ಹೊತ್ತ ಬಿಂದಿಗೆಯು ಅವರ ಹಿಡಿತ ತಪ್ಪಿದರೆ, ಹಿಂದು ಶಾಸ್ತ್ರದ ಪ್ರಕಾರ ಅದೊಂದು ಅಪಶಕುನವಾಗುತ್ತದೆ. ಇದಕ್ಕಾಗಿ ಮನೆಯ ಹಿರಿಯರು ಇಲ್ಲವೆ ಊರು ಗೌಡರು / ಮುಖ್ಯಸ್ಥರು ನಾಗೋಳಿ ಶಾಸ್ತ್ರ ನಡೆಯುವಾಗ ಇದರ ಬಗ್ಗೆ ನಿಗಾವಹಿಸತಕ್ಕದ್ದು.) ಮದು ಮಗಳು ಹೊತ್ತು ತಂದ ನೀರನ್ನು ಮಡಿಲಕ್ಕಿ ಇಟ್ಟಲ್ಲಿ ನೆಲ್ಲಕ್ಕಿ ಅಡಿಯಲ್ಲಿ ಇಡುವುದು. ಅದೇ ನೀರಿನಿಂದ ಮಡಿಲಕ್ಕಿಯನ್ನು ಹಾಕಿ ವಧುವು ಪಾಯಸ ಮಾಡುವುದು. ನೀರು ತರುವಾಗ ಬಾಗಿಲು ತಡೆಯುವ ಒಂದು ಕ್ರಮವಿರುತ್ತದೆ.

**ಬಾಗಿಲು ತಡೆಯುವ ಕ್ರಮ :**

ಇಲ್ಲಿ ಹೆಣ್ಣು ನೀರು ಹೊತ್ತು ತರುವಾಗ ಮನೆಯ ಹೆಬ್ಬಾಗಿಲಿನಲ್ಲಿ ವರನ ಅಕ್ಕ ತಂಗಿಯರು ಬಾಗಿಲು ತಡೆಯುವರು. ಇಲ್ಲಿ ಬಾಗಿಲು ತಡೆಯುವುದು ಇದುವರೆಗೆ ವಧುವರರನ್ನು ಬಹುಶಃ ಏಕ ವಚನದಲ್ಲಿ ಹೆಸರು ಹೇಳಿ ಕರೆಯುತ್ತಿದ್ದರೂ, ಇಂದಿನಿಂದ ಸತಿಪತಿಯರಾದ ನಂತರ ಸತಿಯಾದವಳು ಪತಿಯನ್ನು ಬಹುವಚನದಲ್ಲಿ ಸಂಭೋದಿಸುವುದಲ್ಲದೇ ಹೆಸರು ಹೇಳಬಾರದು ಎನ್ನುವ ಪದ್ಧತಿ ಅವರಿಬ್ಬರಿಂದಲೂ, ವರನಿಂದ ವಧುವಿನ ಹೆಸರನ್ನು, ವಧುವಿನಿಂದ ವರನ ಹೆಸರನ್ನು ಹೇಳಿಸಿ ಒಳಗೆ ಬಿಡುವರು. ಇಲ್ಲಿಗೆ ಕೊನೆಯದಾಗಿ ಅವಳು ಪತಿಯ ಹೆಸರನ್ನು ಹೇಳಿ ಕಟ್ಟು ಕಳೆದಂತೆ ಎಂದು ಹಿಂದಿನಿಂದ ನಡೆದು ಬಂದ ಪದ್ಧತಿ.

**ಓಕುಳಿಯಾಟ :**

ಈಗ ಓಕುಳಿಯಾಟ ಮತ್ತು ಉಂಗುರ ಹುಡುಕುವುದು ಬಹಳಷ್ಟು ಕಡಿಮೆ. ಕೆಲವು ಕಡೆಗಳಲ್ಲಿ ಇದನ್ನು ನೀರು ತರುವುದಕ್ಕೆ ಮುಂಚಿತವಾಗಿಯೂ, ಹಲವು ಕಡೆಗಳಲ್ಲಿ ನಂತರವೂ ನಡೆಸುತ್ತಾರೆ. ಚಪ್ಪರದ ಅಡಿಯಲ್ಲಿ ಒಂದು ಹಂಡೆಯಲ್ಲಿ ಅರಶಿನ ಮಿಶ್ರ ಮಾಡಿದ ನೀರನ್ನು ತುಂಬಿಸಿ, ಅದರೊಳಗೆ ಒಂದು ಚಿನ್ನದ ಉಂಗುರ ಹಾಕುತ್ತಾರೆ. ಗಂಡು ಹೆಣ್ಣು ಇಬ್ಬರೂ ಅದರೊಳಗೆ ಕೈಗಳನ್ನು ಹಾಕಿ ಹುಡುಕುತ್ತಾರೆ. ಆ ಉಂಗುರ ಸಿಕ್ಕಿದವರ ಪಾಲಿಗಾಯಿತು. ನಂತರ ಎದುರು ಬದರು ನಿಂತು ನೀರನ್ನು ಎರಚಿಕೊಳ್ಳುತ್ತಾರೆ.

**ಪೆಟ್ಟಿಗೆ ನೋಡುವ ಪದ್ಧತಿ :**

ಹುಡುಗಿಯ ಮನೆಯಿಂದ ಅವಳ ತಂದೆ ತಾಯಿ ಮಗಳಿಗೆ ಬಳುವಳಿಯಾಗಿ ಕೊಟ್ಟ ಸಾಮಾನುಗಳನ್ನು ವಧುವಿನ ಕಡೆಯ ನೆಂಟರಿಷ್ಟರು, ಊರು ಗೌಡರು / ಮುಖ್ಯಸ್ಥರು ಸೇರಿ ವಧುವಿನ ಸಮ್ಮುಖದಲ್ಲಿ ತುಂಬಿಸಿ ಅದರಲ್ಲಿರುವ ವಸ್ತುಗಳನ್ನು

ಪಟ್ಟಿ ಮಾಡಿ ಪೆಟ್ಟಿಗೆಯ ಮೇಲ್ಭಾಗದಲ್ಲಿ ಒಂದು ನಕಲನ್ನು ಇಟ್ಟಿರುತ್ತಾರೆ. ಗಂಡಿನ ಮನೆಯಲ್ಲಿ ಮೇಲ್ಕಟ್ಟಿನಡಿಯಲ್ಲಿ ವಧುವೂ ಕೂಡಿದಂತೆ ಎಲ್ಲರ ಸಮ್ಮುಖದಲ್ಲಿ ತೆರೆದು ತೋರಿಸುವುದು. ಪೆಟ್ಟಿಗೆ ನೋಡುವುದಕ್ಕೆ ಮೊದಲು ಎಲ್ಲರೂ ಪಟ್ಟಿಗೆ ನೋಡುವುದಕ್ಕೆ ಬರಬೇಕು ಎಂದು ಊರು ಗೌಡರು / ಮುಖ್ಯಸ್ಥರು ಸರ್ವರವನ್ನು ಆಮಂತ್ರಿಸುವರು. ವಧುವು ಪತ್ತಿರದಲ್ಲಿಯೇ ಕುಳಿತಿರುವುದಕ್ಕೆ ಸ್ಥಳ ಇಡುವುದು ಮತ್ತು ಅವರ ಸಮ್ಮುಖದಲ್ಲಿ ತೆರೆಯುವುದು. ಪೆಟ್ಟಿಗೆಯಲ್ಲಿ ತುಂಬಿಸಿರುವ ಬಟ್ಟೆ, ಬರೆ, ಪಾತ್ರೆ, ಪಗ್ಗೆರೆ, ಚಿನ್ನಾಭರಣ ಎಲ್ಲವನ್ನು ಪಟ್ಟಿಯಲ್ಲಿ ಇದ್ದಂತೆ ಓದಿ ಎತ್ತಿ ತೋರಿಸುತ್ತಾರೆ. ಹೀಗೆ ನೋಡಿ ಪೆಟ್ಟಿಗೆಯಲ್ಲಿದ್ದ ಸಾಮಾನುಗಳನ್ನು ಮೊದಲಿನಂತೆಯೇ ತುಂಬಿಸಿ ಇಡುವರು. ಆಗ ಅವರು ಇಟ್ಟಿರುವ ಪಟ್ಟಿಗೂ ಅದರಲ್ಲಿರುವ ಬಳುವಳಿಯ ಸಾಮಾನಿಗೂ ಸರಿ ಇರುವುದೆಂದು ದೃಢಪಡಿಸಿಕೊಳ್ಳುವುದೇ ಮುಖ್ಯ ಉದ್ದೇಶ. ಕಾರಣ ಹೆಣ್ಣು ವಹಿಸಿ ಕೊಡುವಾಗ ಅದನ್ನು ಮುಖ್ಯಸ್ಥರ ಜವಾಬ್ದಾರಿಯಲ್ಲಿ ಕೊಟ್ಟಿರುತ್ತಾರೆ. ಮುಖ್ಯಸ್ಥರು ತನ್ನ ಮೇಲಿನ ಜವಾಬ್ದಾರಿಯನ್ನು ವರನ ಮನೆಯವರಿಗೆ ವರ್ಗಾಯಿದಂತೆ ಆಯಿತು. ಪೆಟ್ಟಿಗೆ ನೋಡಿದವರಿಗೆ ಪೆಟ್ಟಿಗೆಯಲ್ಲಿಟ್ಟಿರುವ ಬಿಸ್ಕತ್ತು ತಾಂಬೂಲಾದಿಗಳನ್ನು ಕೊಟ್ಟು ಸತ್ಕರಿಸುವುದು ಮತ್ತು ಸ್ವಲ್ಪ ಬಿಸ್ಕತ್ತು ಉಳಿಸುವುದು.

**ನಾಗೋಳಿ ಶಾಸ್ತ್ರ ಊಟ :**

ವಧುವಿನ ಮಡಿಲಕ್ಕಿಯಿಂದ ಅವಳು ತಂದ ನೀರಿನಲ್ಲಿ ಅವಳೇ ಒಂದು ಪಾಯಸವನ್ನು ಮಾಡಬೇಕು. ಊಟದ ಸಮಯದಲ್ಲಿ ಹಸೆಗೆ ಸರಿಯಾಗಿ ಎರಡು ಎಲೆ ಹಾಕಿ ಒಂದರಲ್ಲಿ ವರನೂ, ಇನ್ನೊಂದರಲ್ಲಿ ವಧುವಿಗಾಗಿ ಕಾಯ್ದಿರಿಸಿ, ವಧುವು ಮೊದಲು ಪಾಯಸವನ್ನು ವರನ ಎಲೆಗೆ ಬಡಿಸಿ (ಮೂರು ಬಾರಿ ಬಡಿಸಬೇಕು) ನಂತರ ಅವಳ ಎಲೆಗೂ ಬಡಿಸಿ. ಎಲ್ಲರಿಗೂ ಬಡಿಸಿದ ಬಳಿಕ ವರನ ಬಳಿ ಬಂದು ಸಟ್ಟುಗದ ಹಣ ಕೇಳುವುದು. ಆಗ ವರನು ಬಳಸಿದ ಸಟ್ಟುಗಕ್ಕೆ ಚಿಲ್ಲರೆ ಹಣ ಹಾಕಬೇಕು. ತದನಂತರ ವಧುವು ಕೂಡ ಕುಳಿತು ಊಟ ಮಾಡುವುದು. ಊಟ ಮಾಡುತ್ತಿರುವಾದ ವರನು ತನ್ನ ಎಲೆಯಿಂದ ಸ್ವಲ್ಪ ಪಾಯಸವನ್ನು ವಧುವಿನ ಎಲೆಗೆ ಬದಲಿಸುವುದು. ಇಲ್ಲಿ ಸಟ್ಟುಗದ ಹಣ ಪಡೆದು ಅವರ ಎಲೆಯ ಪಾಯಸವನ್ನು ಊಟ ಮಾಡುವಾಗ ಅವರಿಬ್ಬರು ದಂಪತಿಗಳು ಯಾವುದೇ ಬೇಧವಿಲ್ಲದೆ ಬದುಕುವುದು ಮತ್ತು ಅವನ ಅರ್ಧಾಂಗಿ ಎಂಬ ಬಿರುದು ದಕ್ಕಿದಂತೆ ಎಂದು ಹಿರಿಯರು ಹೇಳುತ್ತಾರೆ.

**ಸಂಗಾತಿ ಕಳುಹಿಸುವುದು (ಕುರುಂಟು) :**

ಹೆಣ್ಣು ಇಳಿಸಿ ದಿಬ್ಬಣ ಕಳುಹಿಸುವಾಗ ವಧುವಿನ ಮನೆಯಿಂದ ಒಂದು ಚಿಕ್ಕ ಹುಡುಗಿಯನ್ನು ವಧುವಿನೊಂದಿಗೆ ಕಳುಹಿಸುವ ಕ್ರಮವನ್ನು ಕೆಲವರು ಅನುಸರಿಸುತ್ತಾರೆ.

ಏಕೆಂದರೆ ಪರಿಚಯವಿಲ್ಲದೆ ಮನೆಗೆ ಬರುವ ವಧುವಿನೊಂದಿಗೆ ಮಾತುಕತೆಗಾಗಿ ಮನೆಯಿಂದ ಹೊರಗೆ ವಿಸರ್ಜನೆ ಕಾರ್ಯಗಳಿಗೆ ಹೋಗುವಾಗ ವಧುವಿಗೆ ಸಹಕರಿಸುವುದಕ್ಕೆ ಮತ್ತು ವಧುವರರನ್ನು ಮಾತನಾಡಿಸಲು ನಡುವಿನಲ್ಲಿ ಒಂದು ಮಾಧ್ಯಮವಾಗಿಯೂ ಎಲ್ಲದಕ್ಕೂ ವಧುವಿನ ಅನುಕೂಲಕ್ಕಾಗಿ ಕಳುಹಿಸುವರು. ಇವಳಿಗೆ ಸಂಗಾತಿ ಇಲ್ಲವೇ ಕುರುಂಟು ಎಂದು ಹೇಳುವರು. ಈ ಕುರುಂಟು ಹುಡುಗಿಯನ್ನು ತುಪ್ಪ ತೆಗೆದುಕೊಂಡು ಹೋಗುವಾಗ ಏನಾದರೊಂದು ಉಡುಗೊರೆಯನ್ನು ಕೊಟ್ಟು ತಮ್ಮೊಂದಿಗೆ ಕರೆದುಕೊಂಡು ಹೋಗುವುದು. ವಧುವಿನ ಮನೆಗೆ ತಲುಪಿದಾಗ ಬಹಳಷ್ಟು ಜಾಗ್ರತೆ ವಹಿಸುವುದು. ಕಾರಣ ಅವಳು ಮನೆ ಸೇರುವುದಕ್ಕೆ ಮುಂಚಿತವಾಗಿ ತಪ್ಪಿಸಿಕೊಂಡರೆ ನಮ್ಮ ಸಂಗಾತಿ ಹುಡುಗಿಯನ್ನು ಏನು ಮಾಡಿದ್ದೀರಿ ಅಥವಾ ಏಕೆ ಕರೆತರಲಿಲ್ಲ ಎಂದೂ ಕೂಡಲೇ ತಂದೊಪ್ಪಿಸಬೇಕೆಂದು ಇಲ್ಲದಿದ್ದಲ್ಲಿ ತಪ್ಪು ಕಟ್ಟಿ ನಾವೇ ಕರೆ ತರುವುದಾಗಿಯೂ, ಬಾವ ಮೈದುನರು, ಅತ್ತಿಗೆ ನಾದಿನಿಯರು ಮದುವಣ್ಣನಿಗೆ ತಮಾಷೆ ಮಾಡುವುದಕ್ಕಾದರೂ ಸವಾಲು ಹಾಕುತ್ತಾರೆ.

**ಕೋಣೆಗೆ ಕೂಡಿಸುವ ಕ್ರಮ :**

ವರನ ಕೋಣೆಯನ್ನು ಅಂದವಾಗಿ ಅಲಂಕರಿಸಿ. ಕೋಣೆಯ ಒಳಗೆ ಹಾಲು, ಹಣ್ಣು, ತಾಂಬೂಲ, ಎಲೆ, ಅಡಿಕೆ, ಎಣ್ಣೆ ಚರಕಿನಲ್ಲಿ ಎಣ್ಣೆ, ಒಂದು ಬೋಗುಣಿ ಮತ್ತು ಚೆಂಬಿನಲ್ಲಿ ನೀರು ಇಟ್ಟಿರಬೇಕು. ವಧುವಿನ ಮನೆಯಿಂದ ಕೊಟ್ಟ ಉಡುಗೊರೆ ಸಾಮಾನಿನ ಪೆಟ್ಟಿಗೆ (ಅದರಲ್ಲಿ ಬಿಸ್ಕತ್ತು ಇದೆ) ಕೂಡ ವರನ ಕೋಣೆಯಲ್ಲಿ ಇಡುವುದು. ನಾಗೋಳಿ ಶಾಸ್ತ್ರ ಕಳೆದ ಸಂಜೆ ವರನು ಅವನ ಕೋಣೆಯನ್ನು ಮುಂಚಿತವಾಗಿ ಸೇರುವುದು. ವಧುವನ್ನು ವರನ ಅಕ್ಕ ತಂಗಿಯರು ಕರೆತಂದು ವಧುವಿನ ಕಿವಿಯಲ್ಲಿ ಪಿಸು ಮಾತನ್ನು ಹೇಳಿ ಕೋಣೆಗೆ ಕಳುಹಿಸುವರು. ಕೋಣೆಗೆ ಬಂದ ವಧುವು ಹರ್ಷಭರಿತವಾದ ನಗುಮೊಗದಿಂದ ಹಾಲು ಹಣ್ಣನ್ನು ಮತ್ತು ಪೆಟ್ಟಿಗೆಯಲ್ಲಿರುವ ಬಿಸ್ಕತ್ತನ್ನು ಪತಿಗೆ ಕೊಟ್ಟು ತಾನು ಸೇವಿಸಿ, ವೀಳ್ಯ ಹಚ್ಚಿ ಮಡಚಿ ಪತಿಗೆ ಕೊಟ್ಟು, ಚೆಂಬಿನಲ್ಲಿದ್ದ ನೀರನ್ನು ತೆಗೆದುಕೊಂಡು ಬೋಗುಣಿ ಇಟ್ಟು ಪತಿಯ ಪಾದ ತೊಳೆದು ವಸ್ತ್ರದಿಂದ ಪಾದ ಒರೆಸಿ ತಲೆಗೂ, ಪಾದಕ್ಕೂ ಎಣ್ಣೆ ಹಾಕಿ ಪತಿಯನ್ನು ಸಂತೋಷದಿಂದ ಆದರಿಸಿ ಪತಿಯೊಡನೆ ಶಯನ ಸುಖದಲ್ಲಿ ಪಾಲ್ಗೊಂಡು ತಮ್ಮ ಸ್ಮರಣೀಯ ಮೊದಲ ರಾತ್ರಿಯನ್ನು ಕಳೆಯುವುದು. ಅರಣೋದಯಕ್ಕೆ ಮುಂಚಿತವಾಗಿ ಸತಿಯು ಎದ್ದು ಹೋಗುವಾಗ ಪತಿಯ ಪಾದ ಮುಟ್ಟಿ ನಮಸ್ಕರಿಸಿ ತನ್ನ ಪ್ರಾತಃ ನಿಧಿಗಳಲ್ಲಿ ತೊಡಗುವುದು.

**ತುಪ್ಪ ತೆಗೆದುಕೊಂಡು ಹೋಗುವ ಕ್ರಮ :**

ವಿವಾಹ ಕಳೆದ 3/5ನೇ ಇಲ್ಲವೇ 7ನೇ ದಿನ ಮದುಮಕ್ಕಳು ತಮ್ಮ ಮದುವೆ ಪೋಷಾಕಿನಲ್ಲಿ ಊರಿನ ಮುಖ್ಯಸ್ಥರು ಮತ್ತು ಇತರ ಬಾಂಧವರೊಂದಿಗೆ 5–7 ಜನರ ಈ ಸಮೂಹವು ಸಂಜೆಯ ಹೊತ್ತಿನಲ್ಲಿ ವಧುವಿನ ಮನೆ ಹತ್ತುವುದು. ವಧುವಿನ ಕೈಯಲ್ಲಿ ತುಪ್ಪದ ಚೆಂಬು ಮತ್ತು ಜೋಡಿ ತೆಂಗಿನಕಾಯಿ ಇರತಕ್ಕದ್ದು. ಮನೆ ಹತ್ತಿಸಿದ ನಂತರ ತುಪ್ಪ ಮತ್ತು ತೆಂಗಿನಕಾಯಿಯನ್ನು ನೆಲ್ಲಕ್ಕಿ ಅಡಿಯಲ್ಲಿ ಇಟ್ಟು ಹಸೆಗೆ ಸರಿಯಾಗಿ ಕೂರಿಸುವರು. ಈ ಸಮಯದಲ್ಲಿ ಮದುವೆಗೆ ಬಾರದೆ ಇದ್ದ ಕೆಲವರು ಅವರಿಗೆ ಅಕ್ಕಿ ಹಾಕಿ ಉಡುಗೊರೆ ಕೊಟ್ಟು ಆಶೀರ್ವದಿಸುವುದು ಇದೆ. ತದನಂತರ ಮದು ಮಕ್ಕಳನ್ನು ಹಸೆಯಿಂದ ಏಳಿಸಿ ತುಪ್ಪ ನೋಡುವ ಕ್ರಮ ಮಾಡುವರು. ತುಪ್ಪದ ಚೆಂಬಿನ ಮೇಲೆ ಕಟ್ಟಿದ ಎಲೆಯನ್ನು ಬಿಚ್ಚುವುದು. ಆಗ ಕಟ್ಟಿದ ಹಗ್ಗಕ್ಕೆ ಗಂಟು ಬೀಳದಂತೆ ಎಚ್ಚರ ವಹಿಸಿ ಕಟ್ಟಿರುವರೋ ಎಂದು ಪರೀಕ್ಷಿಸುವರು. ತುಪ್ಪದ ಚೆಂಬಿಗೆ ಕಟ್ಟುವ ಹಗ್ಗ ಗಂಟು ಬೀಳಬಾರದು ಎಂದು ಪದ್ಧತಿ. ತುಪ್ಪವನ್ನು ದೇವರ ದೀಪಕ್ಕೆ ಹುಯಿದು ದೀಪ ಹಚ್ಚುವುದು. ಊಟದ ಸಮಯದಲ್ಲಿ ಎಲ್ಲರಿಗೂ ಬಡಿಸುವುದು. ಈ ಸಮಯದಲ್ಲಿ ಒಂದು ಹೆಸರು ಹೇಳದ ಚಟ್ನಿ ಮಾಡಿರುತ್ತಾರೆ. ಎಲ್ಲರಿಗೂ ಬಡಿಸಿ ಆದ ನಂತರ ಊಟ ಮಾಡಿ ಏಳುವುದಕ್ಕೆ ಮೊದಲು ಊಟಕ್ಕೆ ಬಡಿಸಿದ ಚಟ್ನಿಯ ಹೆಸರು ಹೇಳಿ ಏಳಬೇಕು ಎಂದು ಚಟ್ನಿ ಬಡಿಸಿದ ವಧುವಿನ ಅಕ್ಕ ತಂಗಿಯರು ಹೇಳಿ ಊಟ ಮಾಡುವುದಕ್ಕೆ ಅನುಮತಿಯನ್ನು ಕೊಡುತ್ತಾರೆ ಮತ್ತು ತಪ್ಪಿದಲ್ಲಿ ತಪ್ಪು ಕಟ್ಟಬೇಕು ಎಂದು ಹೇಳುತ್ತಾರೆ. ಚಟ್ನಿಯ ಹೆಸರು ಹೇಳದಿದ್ದಲ್ಲಿ ತಮಾಷೆಗಾಗಿಯಾದರೂ ತಪ್ಪು ಹಾಕುವರು. ಅಂದು ಅಲ್ಲಿಯೇ ತಂಗಿ ಮರುದಿನ ಬೆಳಗ್ಗಿನ ಉಪಹಾರ ಸ್ವೀಕರಿಸಿದ ನಂತರ ಹಿಂತಿರುಗುವರು.

**ಹತ್ತು ಉಳಿಯುವುದು :**

ತುಪ್ಪದ ಶಾಸ್ತ್ರ ಮುಗಿಸಿ ಮನೆಗೆ ಮರಳಿದ ಮದುಮಗಳು ಕೆಲ ದಿನಗಳಲ್ಲಿ ತನ್ನ ತಂದೆ, ತಾಯಿ, ಅಣ್ಣ ತಮ್ಮಂದಿರ ಸಹವಾಸದಿಂದ ದೂರವಾಗಿ ಪತಿಯ ಮನೆಯು ಒಮ್ಮೆಗೆ ಒಗ್ಗದೇ ಇರಬಹುದು. ಇದರಿಂದ ಹೆಣ್ಣಿನ ಮನಸ್ಸಿಗೆ ಬೇಸರವಾಗಬಾರದು ಎಂದು ಹುಡುಗಿಯನ್ನು ಹುಡುಗಿಯ ಮನೆಯವರು ಬಂದು ಕರೆದುಕೊಂಡು ಹೋಗುವರು. ಅವರ ತವರಿನಲ್ಲಿ ಕೆಲವು ದಿನಗಳು ಕಳೆದ ನಂತರ ಹುಡುಗನ ಕಡೆಯವರು ಇಲ್ಲವೇ ಹುಡುಗನೇ ಬಂದು ಕರೆದುಕೊಂಡು ಹೋಗುವುದು.

**ಆಟಿ ಕೂರಿಸುವ ಕ್ರಮ :**

ಆಟಿ ಇದು ಕನ್ನಡದ ಕರ್ಕಟಕ (ಕಕ್ಕಡ) ತಿಂಗಳು. ಈ ತಿಂಗಳು ವರ್ಷದ ಎಲ್ಲಾ ತಿಂಗಳಿಗಿಂತ ಭಿನ್ನ. ಶುಭ ಕಾರ್ಯಗಳಿಗೆ ಅರ್ಹವಲ್ಲದ ತಿಂಗಳು ಎಂದು ವಾಡಿಕೆ. ಇದರಲ್ಲಿ ಆಶುಭಗಳು ಹೆಚ್ಚು ಎನ್ನುವರು. ಅದಕ್ಕಾಗಿ ನವದಂತಿಗಳು ಒಬ್ಬರನೊಬ್ಬರು ನೋಡುವುದು ಸರಿಯಲ್ಲ ಎಂದು ಹಿರಿಯರ ನಂಬಿಕೆ ಆದುದರಿಂದ ವಧುವಿನ ಮನೆಯವರು ಬಂದು ವರನ ಮನೆಯವರ ಸಮ್ಮತಿ ಪಡೆದು ವಧುವನ್ನು ಕರೆದುಕೊಂಡು ಹೋಗುವರು. ಇತ್ತೀಚಿನ ದಿನಗಳಲ್ಲಿ ಕೆಲ ದಿನಗಳ ಮಟ್ಟಿಗೆ ವಧುವಿನ ಮನೆಯಲ್ಲಿ ಬಿಟ್ಟು ವರನು ಬಂದು ಕರೆದುಕೊಂಡು ಹೋಗುವನು.

**ಸಂಗಮದ ತೀರ್ಥ ಸ್ನಾನ :**

ನವದಂಪತಿಗಳು ಅನುಕೂಲ ರೀತ್ಯಾ ಮೊದಲ ವರ್ಷ ಕೊಡಗಿನ ತೀರ್ಥ ಕ್ಷೇತ್ರವಾದ ಕಾವೇರಿಗೆ ಹೋಗಿ ಅಲ್ಲಿ ಕಾವೇರಿ ಮತ್ತು ಕನ್ನಿಕೆ ನದಿಗಳು ಸೇರುವ ಸಂಗಮದಲ್ಲಿ ಕೈ ಕೈ ಹಿಡಿದು ಜೊತೆಯಲ್ಲಿ ನೀರಿನಲ್ಲಿ ಮುಳುಗಿ ಸ್ನಾನ ಮಾಡಿ ನಂತರ ದೇವರ ಪೂಜಾ ಕಾರ್ಯಗಳನ್ನು ಮುಗಿಸಿ ತೀರ್ಥ ಪ್ರಸಾದವನ್ನು ಸ್ವೀಕರಿಸಿ ಮನೆಗೂ ತೆಗೆದುಕೊಂಡು ಹಿಂತಿರುಗುವುದು.

ಅಸಮದಲ್ಲಿ ಸಮತೆಯನು ವಿಷಮದಲ್ಲಿ ಮೈತ್ರಿಯನು
ಅಸಮಂಜಸದಿ ಸಮನ್ವಯ ಸೂತ್ರ ನಯವ
ವೆಸನಮಯ ಸಂಸಾರದಲ್ಲಿ ವಿನೋದವ ಕಾಣ್ಬ
ರಸಕತೆಯೇ ಯೋಗವಲ್ಲೊ ಮಂಕುತಿಮ್ಮ

**– ಡಿ.ವಿ. ಗುಂಡಪ್ಪ**

ಆತ್ಮಹತ್ಯಾ ಮುರ್ಖತಾಃ ಪೂರ್ಣ ನಿಂದನೀಯ ಕರ್ಮ.

**– ಭಗವಾನ್ ಬುದ್ಧ**

ಒಳ್ಳೆಯ ಬೀಜವಾದರೂ ಸರಿ ಗೊಬ್ಬರವಿಲ್ಲದ ಮಣ್ಣಿನಲ್ಲಿ ನೆಟ್ಟರೆ ಮೊಳೆತು ಗಿಡವಾದರೂ ಫಸಲಿಲ್ಲದೇ ವ್ಯರ್ಥವಾದೀತು. ಅಂತೆಯೇ ಒಳ್ಳೆಯ ಸಂತಾನಕ್ಕಾಗಿ ಹಂಬಲಿಸುವ ಕುಟುಂಬದಲ್ಲಿ ಹೆಣ್ಣು ಅತಿ ಕಾಮಿಯಾಗದೇ ಮನ ಶುದ್ಧಿಯಿಂದ ಸತ್ಯ ವೃತದಲ್ಲಿರಬೇಕು.

**– ಸುಭಾಷಿತ.**

**ದಂಪತಿ ಮುಹೂರ್ತ :**

ಉಭಯ ಕಡೆಯವರು ಮೊದಲೇ ತೀರ್ಮಾನಿಸಿಕೊಂಡಂತೆ ಸಮಾಜದ ಕಟ್ಟಡದಲ್ಲಿ, ಕಲ್ಯಾಣ ಮಂಟಪದಲ್ಲಿ, ದೇವಸ್ಥಾನದ ಛತ್ರದಲ್ಲಿ ಇಲ್ಲವೇ ಕೆಲವೊಮ್ಮೆ ರಜಾ ದಿನಗಳಲ್ಲಿ ಶಾಲಾ ಕಟ್ಟಡದಲ್ಲಿ ಎರಡು ಕಡೆಯವರಿಗೂ ಅನುಕೂಲವಾಗುವ ಸ್ಥಳದಲ್ಲಿ ಮದುವೆ ಏರ್ಪಡಿಸುವರು. ಸಮಾಜ ಕಟ್ಟಡಗಳಲ್ಲಿ ಎಲ್ಲಾ ಶಾಸ್ತ್ರಗಳನ್ನು ಮಾಡುವ ಏರ್ಪಾಡುಗಳೂ ಇರುವುದು. ಉಭಯ ಕಡೆಯವರು ಅಲ್ಲಿಯೇ ಶಾಸ್ತ್ರಗಳನ್ನು ಮಾಡುವರು. ಇಲ್ಲವೇ ಅವರ ಇಷ್ಟಾನುಸಾರ ಮನೆಯಿಂದಲೇ ಶಾಸ್ತ್ರಗಳನ್ನು ಮುಗಿಸಿ ಸಮಾಜದ ಕಟ್ಟಡದಲ್ಲಿ ಚಪ್ಪರದ ಊಟ ಏರ್ಪಾಡು ಮಾಡಿ, ಸಮಾಜಕ್ಕೆ ಬಂದು ಸೇರಿಕೊಳ್ಳುವರು. ಅಂತೆಯೇ ಮರುದಿನ ನಡೆಯುವ ಶೇಷೋಪಚಾರ (ಅಕ್ಕಿ ಮುಹೂರ್ತ)ಕ್ಕೆ ಮೊದಲು ಧಾರಾ ಕಾರ್ಯಕ್ರಮವನ್ನು ಮುಗಿಸಿ ನಿಗದಿತ ಸಮಯಕ್ಕೆ ಆರತಕ್ಷತೆಗೆ ಕೂರಿಸುವರು. ಹಿಂದೆ ಹೇಳಿದಂತೆ ಸರದಿಯಂತೆ ಎಲ್ಲರೂ ಬಂದು ಮದುಮಕ್ಕಳ ತಲೆಗೆ ಅಕ್ಕಿ ಹಾಕಿ ಆಶೀರ್ವದಿಸುವರು. 'ಆಯುರಾರೋಗ್ಯ ಎಂಬ ಸಂಪನ್ನರಾಗಿ ಪುತ್ರ ಕಳತ್ರ ವಂಶಾಭಿವೃದ್ಧಿಯಾಗಿ ದೀರ್ಘಾಯುಷ್ಯರಾಗಿ ಬಾಳಿರಿ ಎಂದು ಮನಸಾರೆ ಹರಸಿ ಅಕ್ಕಿ ಹಾಕುವರು. ಮದುವೆಯ ಕಾರ್ಯಕ್ರಮ ಎಲ್ಲವೂ ಮುಗಿದ ನಂತರ ಉಭಯ ಕಡೆಯವರು ಕಲ್ಯಾಣ ಮಂಟಪದ ಬಾಡಿಗೆಯಿಂದ ಹಿಡಿದು, ಮಡಿವಾಳ, ಓಲಗದವರ ಚಾರ್ಜು ಕೂಡಾ ಊಟದ ಖರ್ಚು ವೆಚ್ಚಗಳನ್ನು ಹೆಣ್ಣು ಮತ್ತು ಗಂಡಿನ ಉಭಯ ಕಡೆಯವರು ಸಮನಾಗಿ ಅರ್ಧರ್ಧ ಹಾಕುವರು. ಇದು ಇಂದು ಮುಂದುವರಿದ ಸಮಾಜದಲ್ಲಿ ಖರ್ಚು ವೆಚ್ಚಗಳು ಎರಡು ಕಡೆಯಲ್ಲಿ ಬೇರೆ ಬೇರೆಯೇ ಆಗಿ ಹೆಚ್ಚಿಗೆ ಆಗುವ ಬದಲು ಒಂದೇ ಕಡೆಯಿಂದಾಗಿ ಕಡಿಮೆ ಖರ್ಚಾಗುವುದು ಬಹಳಷ್ಟು ಒಳ್ಳೆಯದು. ಇದು ಸಮಾಜದ ಕಟ್ಟಡಗಳಲ್ಲಿ ನಡೆಯುವ ದಂಪತಿ ಮುಹೂರ್ತವಾಗುವುದು.

**ಕಾಲದ ಕರೆ**

'ಮಲಗಿದ್ದವನು ಕಲಿಯುಗದವನು, ಹಾಸಿಗೆಯನ್ನು ತ್ಯಜಿಸುವವನು ದ್ವಾಪರದವನು, ಎದ್ದು ನಿಲ್ಲುವವನು ತ್ರೇತಾಯುಗವನ್ನು ನಿರ್ಮಿಸುವವನು ಮುನ್ನಡೆಯುವವನು ಕೃತಯುಗವನ್ನು ತರುವವನು. ಆದುದರಿಂದಲೇ ಮುನ್ನಡೆಯಿರಿ, ಮುನ್ನಡೆಯಿರಿ.

**– ಪಂ. ದೀನ ದಯಾಲ್ ಉಪಾಧ್ಯಾಯ.**

# ಬಯಕೆ ಮದುವೆ (ಸೀಮಂತ)

ಕನ್ಯೆಯನ್ನು ವಿವಾಹ ಮಾಡಿಕೊಟ್ಟು ಗರ್ಭವತಿಯಾದಾಗ ವರನ ಮನೆಯವರು ಹೆಣ್ಣಿನ ಮನೆಯವರಿಗೆ ಸಮಾಚಾರವನ್ನು ತಿಳಿಸುವರು. ಈ ಗರ್ಭದ ಕಾಲ ನವವಧುವಿನ ಜೀವನದಲ್ಲಿ ಮೊದಲನೇ ತಾಯಿಯಾಗುವ ಬಯಕೆ. ಆಗ ಅವರ ಮನಸ್ಸಿಗೆ ಆನಂದವೂ ಉಲ್ಲಾಸವೂ ಇರುವುದು. ಮೊದಲನೆಯ ಬಾಣಂತನ ತವರು ಮನೆಯಲ್ಲಿ ಆಗುವುದು ರೂಢಿ. ಇದು ಅವಳ ಬಯಕೆ.

ಮಗಳು ಗರ್ಭವತಿಯಾದ ವಿಚಾರವನ್ನು ತಿಳಿದ ತವರು ಮನೆಯವರು ಮಗಳನ್ನು ಏಳನೆ ತಿಂಗಳಲ್ಲಿ ಬಂದು ಕರೆದುಕೊಂಡು ಹೋಗುವರು. ನಂತರ ಹೆಣ್ಣಿನ ತವರು ಮನೆಯಲ್ಲಿ ಗರ್ಭವತಿಯಾದ ಏಳನೆ ಯಾ ಒಂಭತ್ತನೆ ತಿಂಗಳಲ್ಲಿ 'ಬಯಕೆ ಮದುವೆ' ಮಾಡುವ ಕ್ರಮವಿದೆ.

ಬಯಕೆ ಮದುವೆ ಮಾಡುವ ಸಮಯಕ್ಕೆ ಮುಂಚಿತವಾಗಿ ಕದಳಿ ಬಾಳೆಹಣ್ಣು, ಭತ್ತದಿಂದ ತಯಾರಿಸಿದ ಹುದುರಿ ಮತ್ತು ಅವಲಕ್ಕಿ ಶೇಖರಿಸಿಡುವರು. ಬಯಕೆ ಮದುವೆಯನ್ನು ನಿಶ್ಚಿತ ಶುಭ ದಿನದಂದು ಮಾಡುವರು. ಅಲ್ಲದೆ ನೆರೆಯವರನ್ನು, ನೆಂಟರಿಷ್ಟರನ್ನು, ಪತಿಯನ್ನು ಆಹ್ವಾನಿಸಿಕೊಳ್ಳುವರು. ನಿಶ್ಚಿತ ದಿನದಂದು ಶುಭ ಘಳಿಗೆಯಲ್ಲಿ ಗರ್ಭಿಣಿ ಹೆಣ್ಣಿಗೆ ತವರಿನವರು ಒಂದು ಹೊಸ ಸೀರೆಯನ್ನು ಉಡಿಸುವರು.

ಗರ್ಭಿಣಿಗೆ 7 ತಿಂಗಳಾದರೆ ಏಳು ತರಹದ ಹೂವುಗಳನ್ನು, 9 ತಿಂಗಳಾದರೆ ಒಂಭತ್ತು ತರಹದ ಹೂವುಗಳನ್ನು ಮುಡಿಗೆ ಮುಡಿಸುವರು ಮತ್ತು ಎಷ್ಟು ತಿಂಗಳಾಗಿದೆಯೋ ಅಷ್ಟೇ ತರಹದ ಪದಾರ್ಥಗಳನ್ನು ಮಾಡುವರು.

ನಂತರ ಗರ್ಭಿಣಿಯನ್ನು ಮತ್ತು ಅವಳ ಪತಿಯನ್ನು ಹತ್ತಿರ ಹತ್ತಿರವಾಗಿ ಎರಡು ಮಣೆಗಳ ಮೇಲೆ ಕುಳ್ಳಿರಿಸುವರು. ದೀವಿಗೆಯನ್ನು ಹೊತ್ತಿಸಿಡುವರು. ಮೊದಲು ಹುದರಿ ಮತ್ತು ಅವಲಕ್ಕಿಯನ್ನು ಗರ್ಭಿಣಿಗೆ ಮತ್ತು ಅವಳ ಪತಿಗೆ ಮೂರು ಸಲ ಗರ್ಭಿಣಿಯ ತಾಯಿ (ಮುತ್ತೈದೆಯಾಗಿದ್ದರೆ ಇಲ್ಲದಿದ್ದರೆ ಚಿಕ್ಕ ತಾಯಿ) ಬಡಿಸುವರು. ಹೀಗೆ ಬಡಿಸುವಾಗ ಇಬ್ಬರು ಎಲೆಯನ್ನು ಮುಟ್ಟಿ ನಮಸ್ಕರಿಸುವರು. ಬಾಳೆಹಣ್ಣುಗಳನ್ನು ತಿಂಗಳಿಗನುಸಾರವಾಗಿ ಬಡಿಸುವರು. ಅವರ ಪಕ್ಕಗಳಲ್ಲಿ (7 ಯಾ 9 ತಿಂಗಳಿನಂತೆ) ಜನರು ಕುಳಿತುಕೊಳ್ಳುವರು. ಇವರಿಗೆಲ್ಲ ಬಳಸಿದ ನಂತರ ಸೇರಿದ ನೆಂಟರಿಷ್ಟರಿಗೆ ಬಡಿಸುವರು. ಅಲ್ಲದೆ ಊಟಕ್ಕೆ ಹಲವು ತರಹದ ಸಸ್ಯಹಾರದ ಪದಾರ್ಥ, ಪಾಯಸ, ಪಲ್ಯಗಳನ್ನು ಮಾಡುವುದು ರೂಢಿಯಲ್ಲಿದೆ.

ಕೆಲವೆಡೆಗಳಲ್ಲಿ ಸರ್ವ ಸಾಧಾರಣವಾಗಿ ಸತ್ಯನಾರಾಯಣ ಪೂಜೆಯನ್ನು ಮಾಡುವುದು ರೂಢಿಯಲ್ಲಿದೆ.

## ಗೌಡರ ವಿವಾಹ ಪದ್ಧತಿಯಲ್ಲಿ ಕೂಡಾವಳಿ ಸಂಪ್ರದಾಯ

ಗೌಡರ ವಿವಾಹ ಪದ್ಧತಿಯಲ್ಲಿ ಕೂಡಾವಳಿಯು ಒಂದು. ಇದು ಪುನರ್ ವಿವಾಹ ವಿಧವಾ ವಿವಾಹ ಎಂದು ಹೇಳುವುದಕ್ಕಿಂತಲೂ ಭಿನ್ನವಾದುದು. ಗಂಡಾಗಲಿ ಹೆಣ್ಣಾಗಲಿ ತನ್ನ ಸಂಸಾರದ ಬಾಳಿನಲ್ಲಿ ದುರಂತ ಕಂಡು ಅವರು ಏಕಾಂಗಿಯಾದರೆ ಅವರಿಗೆ ಅಂತಹವರೇ ಆದವರೊಡನೆ ಆಗುವ ವಿವಾಹಕ್ಕೆ 'ಕೂಡಾವಳಿ' ಎಂದು ಹೇಳುವರು.

ಇಲ್ಲಿ ಅವಿವಾಹಿತ ಹೆಣ್ಣಿನೊಂದಿಗೆ ವಿವಾಹಿತನೊಬ್ಬ ಪತ್ನಿ ವಿಯೋಗದಿಂದ ಅವನ ಯೌವ್ವನಾವಸ್ಥೆಯಲ್ಲಿ ವಿಧುರನಾದರೆ ಕನ್ಯೆ ಹೆಣ್ಣಿನೊಂದಿಗೆ ವಿವಾಹವಾಗಬಹುದು. ಹಾಗೇ ಆಗುವ ವಿವಾಹಕ್ಕೆ 'ಪುನರ್ ವಿವಾಹ' ಎಂದು ಹೇಳಬಹುದು. ಹೆಣ್ಣಿಗೆ ಇದು ಮೊದಲ ಧಾರೆ ವಿವಾಹವಾದ ಕಾರಣ ಇದನ್ನು ವಿವಾಹವೆಂದು ಪರಿಗಣಿಸುವರು. ಹಾಗೆಯೇ ಹೆಣ್ಣೊಬ್ಬಳು ಪತಿಯ ವಿಯೋಗದಿಂದ ವಿಧವೆಯಾಗಿ ಯೌವ್ವನಾವಸ್ಥೆಯಲ್ಲಿದ್ದರೆ, ಅವಿವಾಹಿತ ಗಂಡಿನೊಂದಿಗೆ ವಿವಾಹವಾಗಬಾರದು. ಕಾರಣ ಹೆಣ್ಣಿಗೆ ಎರಡನೇಯ ಧಾರೆಯಿಲ್ಲ. ಗಂಡೇ ಆಗಲಿ ಹೆಣ್ಣೆ ಆಗಲಿ ಧಾರಾ ವಿವಾಹವಾಗದೆ ಮೋಕ್ಷವಿಲ್ಲವೆಂದು ಹೇಳುವುದು ವಾಡಿಕೆ. ಪತಿಯ ವಿಯೋಗದಿಂದ ಯೌವ್ವನಾವಸ್ಥೆಯಲ್ಲಿರುವ ವಿಧವೆಯನ್ನು ತನ್ನ ಬಾಳ ಸಂಗಾತಿಯಾಗಿ ಆರಿಸಿ, ಅವಿವಾಹಿತನೊಬ್ಬ ಇಷ್ಟಪಟ್ಟರೆ ಅದು ವಿವಾಹವಾಗಲಾರದು, ಬದಲು ಕೂಡಾವಳಿ ಎಂದೆ ಕರೆಯುವರು. ಯಾವ ಒಂದು ವಿವಾಹವು ಧಾರೆ ಕಾರ್ಯಕ್ರಮವಿಲ್ಲದೆ ನಡೆಯುವುದೋ ಅದು 'ಕೂಡಾವಳಿ ಆಗುವುದು. ಇಲ್ಲಿ ಧಾರೆಯ ಹೆಣ್ಣಿಗೆ ತನ್ನ ಜೀವನದಲ್ಲಿ ಒಂದು ಬಾರಿಯೂ, ಗಂಡಿಗೆ ಒಂದಕ್ಕಿಂತ ಹೆಚ್ಚು ಬಾರಿಯೂ ಇರುವುದರಿಂದ, ಧಾರೆ ಎಂಬ ಸಂಪ್ರದಾಯದಲ್ಲಿ ಬರುವ ಶಾಸ್ತ್ರದ ಶ್ರೇಷ್ಠತೆಯನ್ನು ಕಾಪಾಡಿರುವುದು ಹೆಣ್ಣು ಮಾತ್ರ, ಆದುದರಿಂದ ಒಮ್ಮೆ ಧಾರೆ ವಿವಾಹವಾದ ಹೆಣ್ಣನ್ನು ಯಾರೇ ಸಂಗಾತಿಯಾಗಿ ಬಯಸಿದರೂ ಅದು ಕೂಡಾವಳಿಯೇ ಎಂದು ಮನದಟ್ಟಾಗುವುದು. ಕೂಡಾವಳಿಯು ವಿಧವೆಯಾದರೂ ವಿಧುರನಾದರೂ ತನ್ನ ಜೀವನದ ಸಂಗಮತೆಗೆ ಬಾಳ ಸಂಗಾತಿಗಳಾಗಿ ಆರಿಸಿಕೊಳ್ಳುವುದು ಎಂದು ತಿಳಿಯವುದು.

ಕೂಡಾವಳಿಯಲ್ಲಿ ಬಾಳ ಸಂಗಾತಿಗಳನ್ನು ತಲೆಗೆ ಅಕ್ಕಿ ಹಾಕಿ ಆಶೀರ್ವದಿಸುವಂತಿಲ್ಲ. ಉಡುಗೊರೆ ಕೊಟ್ಟರೂ ದೀವಿಗೆಗೆ ಅಕ್ಕಿ ಹಾಕಿ ಕೂಡಾವಳಿಯಾದ ಸಂಗಾತಿಗಳು ಹಿರಿಯರ ಪಾದ ನಮಸ್ಕಾರ ಮಾಡುವಾಗ ಅವರಿಗೆ ಆಶೀರ್ವದಿಸುವುದು ಕ್ರಮ. ಕೂಡಾವಳಿಯಲ್ಲಿ ಗಂಡು ಹೆಣ್ಣಿಗೆ ಕಾಲುಂಗುರ, ಸೀರೆ, ರವಿಕೆ ಮಾತ್ರ ಕೊಡುವುದು.

(ಬಣ್ಣ ಬಂಗಾರವಿಲ್ಲ) ಹೆಣ್ಣು ಸ್ನಾನ ಮಾಡಿ ಗಂಡು ಕೊಟ್ಟ ಉಡುಪಿನಿಂದ ಅಲಂಕೃತಳಾಗಿ ನೆಲ್ಲಕ್ಕಿ ಅಡಿಗೆ ಬರುವುದು. ಗಂಡು ಕೂಡಾ ಸ್ನಾನ ಮಾಡಿ ತನ್ನ ಮದುವಣಿಗನ ಪೋಷಾಕಿನಿಂದ ನೆಲ್ಲಕ್ಕಿ ಅಡಿಗೆ ಬರುವುದು. ಅಲ್ಲಿ ಊರು ಗೌಡರು/ ಮುಖ್ಯಸ್ಥರು ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ ಒಕ್ಕಲೆಜಮಾನರಿಗೆ ಗಂಡಿನ ಕಡೆಯಿಂದ ಮೊದಲ ಕೂಡಾವಳಿಯಾದರೆ ರೂ. 2.25ಗಳ ತೆರವಿನ ಹಣವನ್ನೂ, ಎರಡನೆಯ ಕೂಡಾವಳಿಯಾದರೆ ರೂಪಾಯಿ 1.25 ತೆರವಿನ ಹಣವಾಗಿ ಕೊಡಿಸಿ, ಮೂರನೆಯಾದಾದರೆ ತೆರವಿನ ಹಣವಿಲ್ಲದೆ ಕೇವಲ ಬಿಳಿ ಸೀರೆಯನ್ನು ಮಾತ್ರ ಕೊಡುವುದು. ತದನಂತರ ಸರ್ವರ ಒಪ್ಪಿಗೆ ಪಡೆದು ಗಂಡಿನಿಂದ ಹೆಣ್ಣಿಗೆ ತಾಳಿ ಕಟ್ಟಿಸುವುದು. (ಪುಷ್ಪಮಾಲಿಕೆಗಳನ್ನು ಹಾಕುವಂತಿಲ್ಲ. ಹತ್ತು ಕುಟುಂಬ ಹದಿನೆಂಟು ಗೋತ್ರ ಒಕ್ಕಣೆ ಹೇಳಬಹುದು.)

ಗಂಡು ಹೆಣ್ಣನ್ನು ತನ್ನ ಮನೆ ಹತ್ತಿಸಿಕೊಳ್ಳುವಾಗಲೂ ಯಾವುದೇ ತರಹದ ಶಾಸ್ತ್ರಗಳಿಲ್ಲ. ತುಪ್ಪ ತೆಗೆದುಕೊಂಡು ಹೋಗುವುದು, ಹತ್ತು ಉಳಿಯುವುದು, ಆಟಿಯ ಕ್ರಮ ಇದು ಯಾವುದೂ ಕೂಡಾವಳಿಯಲ್ಲಿ ಬರುವುದಿಲ್ಲ)

ಕೂಡಾವಳಿ ಸಂಪ್ರದಾಯವು ಗೌಡ ಜನಾಂಗದಲ್ಲಿ ನಡೆದು ಬರುತ್ತಿದೆ. ಇದು ಧರ್ಮಕ್ಕೆ ಅನುಗುಣವೂ ಆಗಿದೆ. ಇದರಲ್ಲಿ ಯಾವುದೇ ಶಾಸ್ತ್ರವು ಕಂಡು ಬಾರದಿದ್ದರೂ, ಶಾಸ್ತ್ರವು ಧರ್ಮದ ಒಂದು ಅಂಗದಂತೆ, ಕೂಡಾವಳಿಯು ಸಹ ಧರ್ಮದ ಒಂದು ಅಂಗವೆಂದೇ ತಿಳಿಯುವುದು. ಶಾಸ್ತ್ರವಿಲ್ಲದ ಸಂಪ್ರದಾಯವೆಂದು ಸಮಾಜದಲ್ಲಿ ಇದಕ್ಕೆ ಮಾನ್ಯತೆ ಕಡೆಮೆಯಾಗಕೂಡದು. ಮಾನವನ ಜೀವನದ ಸುಗಮತೆಗೆ ಕೂಡಾವಳಿ ಸಂಪ್ರದಾಯದ ಅಗತ್ಯವಿದೆ. ಆದುದರಿಂದ ಸಂಪ್ರದಾಯದಂತೆ ನಡೆಯುವ ಈ ಕೂಡಾವಳಿಗೂ ಹಿಂದೂ ಸಮಾಜದ ಇತರ ಕೆಲವು ಜನಾಂಗದವರು ಕೂಡಾ ಮಾನ್ಯತೆಯನ್ನು ನೀಡುವರು.

ಕಳೆದ ಯೌವ್ವನವನ್ನು ಮರಳಿ ಪಡೆಯುವುದು ಸುಲಭ, ನಮ್ಮ ಹುಚ್ಚಾಟಗಳನ್ನು ಪುನರಾವರ್ತಿಸಿದರಾಯಿತು.

**– ಅಸ್ಕರ್ ವೈಲ್ಡ್**

ಸೋರುವ ಮನೆಯಲ್ಲಿ ಮಳೆ ಬೀಳದಂತೆ ಬಿಗಿ ಹಿಡಿಯದ ಮನಸ್ಸಿನಲ್ಲಿ ಆಸೆಯು ಒಳ ನುಗ್ಗುತ್ತದೆ.

**– ಭಗವಾನ್ ಬುದ್ಧ**

# ಸೋಬಾನೆ ಹಾಡುಗಳು

**1. ಅ) ಎಣ್ಣೆ ಅರಶಿನ ಮಾಡುವಾಗ ಹೇಳುವ ಹಾಡುಗಳು**

ಎಣ್ಣೆಯ ನೊತ್ತಿದರು, ಮೀನಾಕ್ಷಿಗೆ ಎಣ್ಣೆಯನೊತ್ತಿದರು ॥
ಸುಗುಣ ಸಂಪೂರ್ಣೆಗೆ ನಿಗಮದ ವಿನೂತೆಗೆ ॥
ಜಾಜಿಯ ಹೂವಿನ ಎಣ್ಣೆ ಅರಶಿಣ ಒತ್ತಿದರು ।
ಮೀನಾಕ್ಷಿಗೆ ಎಣ್ಣೆಯನೊತ್ತಿದರು ॥
ಸುರವರನ ಪಾಲೆಗೆ ಗಿರಿರಾಜ ಬಾಲೆಗೆ ॥
ತಿರುವಂತಿನ ಹೂವಿನ ಎಣ್ಣೆ ಅರಶಿಣ ಒತ್ತಿದನು ।
ಮೀನಾಕ್ಷಿಗೆ ಎಣ್ಣೆಯನೊತ್ತಿದರು ॥ ಕರಪೂರಲೋಲನ ಶಂಕರನ ಪತ್ನಿಗೆ ॥
ತಿರುವಂತಿನ ಹೂವಿನ ಎಣ್ಣೆ ಅರಶಿಣ ಒತ್ತಿದರು ।
ಮೀನಾಕ್ಷಿಗೆ ಎಣ್ಣೆಯನೊತ್ತಿದರು ।
ಸ್ವಾಮಿ ಮಾವ ಕಂಸನ ಕೊಂದಿರೆ ॥
ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ ॥
ಸ್ವಾಮಿ ರಂಗನಾಥನ ಪ್ರಿಯೆಗೆ ॥
ಬಿಲ್ಲಹಬ್ಬಕೆ ಅಲ್ಲಿ ಪೋಗಿ ಮಾವಕಂಸನ ಕೊಂದಿರೆ
ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ
ಸ್ವಾಮಿ ರಂಗನಾಥನ ಪ್ರಿಯೆಗೆ ॥
ಹಾಸು ಮಂಚವ ಲೇಸು ತಲೆದಿಂಬು ಅಕ್ಕಿ ಹಾಸಿಗೆ ಹಾಸಲೇ ॥
ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ
ಸ್ವಾಮಿ ರಂಗನಾಥನ ಪ್ರಿಯೆಗೆ ॥

ಆ) ಶರಣು ಲೋಕನಾಯಕ ವೆಂಕಟೇಶನಿಗೆ, ನೀ ಕರುಣಿಸಿ ಸಲಹೋ ದೇವ ಜಂಪ ಜಯ ರಾಮ ಜಯರಾಮ । ಪಟ್ಟೆ ಪೀತಾಂಬರ ನೆರೆದುಟ್ಟು ವೀಣೆ ಕಸ್ತೂರಿ ಫಣಿಯೊಳು ತೊಟ್ಟು ಜಾಣೆಯರೆಲ್ಲಾ ನೆರೆದರು. ಸುಂದರವಾದ ಬಾಣವ ಪಟ್ಟದಾನೆಗಳಂತೆ । ಜಯ ಜಯ ರಾಮ ಜಯರಾಮ । ಮದುವೆಯ ನಾಲ್ಕು ದಿನಗಳಲ್ಲಿ ಮದುವಣಿಗೆ ಸೀತಾರಾಮರಿಗೆ ಮುದದಿಂದ ಎಣ್ಣೆ ಅರಶಿನವ ಮಾಳ್ಪ ಸಂಭ್ರಮದ ಕೇಳಿ । ಜಯ ಜಯ ರಾಮ ಜಯ ರಾಮ । ಬ್ರಹ್ಮನ ಪತ್ನಿ ಸರಸ್ವತಿದೇವಿ ವಾಯು ರುಕ್ಮಿಣಿದೇವಿ ಹರನಲ್ಲದೇ ಪಾರ್ವತಿದೇವಿ ಸಹಿತ ಅರಶಿಣ ಎಣ್ಣೆಯ ಮಾಡಬಂದಾಗ । ಜಯ ಜಯ ಜಯರಾಮ ಜಯರಾಮ । ಹರುಷದಿಂದಲೇ ಕೌಶಲ್ಯೆ ಕೈಕೇಯ ಸುಮಿತ್ರೆಯರು ಶ್ರೀ ರಾಮಚಂದ್ರನಿಗೆ ಅರಶಿಣವ ಮಾಡಿದರಾಗುತೆ,

ಸುಮಿತ್ರದೇವಿ ಕೇರಿ ಕೇರಿಯೊಳಿದ್ದ ನಿತ್ರೆಯರನ್ನೆಲ್ಲ ಕರೆಯಿಸಿದರೆ । ಜಯ ಜಯ ರಾಮ ಜಯರಾಮ । ಕುಸುಮ ಬಾಣಕ್ಕೆ ಮೂರ್ಜಾಲದಂತೆ ದಶರಥನರಮನೆಯಲ್ಲಿ। ಬಣ್ಣ ಬಣ್ಣದ ಪಟ್ಟೆಯನ್ನುಟ್ಟು ಪುತ್ರಂಗಿಗಳ ತೊಟ್ಟು ಮಿನುಗುವ ಮುಸುಕವನ್ನುಟ್ಟು । ಪರಿಮಳ ತುಂಬಿ ನಿಂದಾರು ಅರಮನೆಯಲ್ಲಿ । ಜಯ ಜಯ ರಾಮ ಜಯರಾಮ। ಅಲ್ಲಿಗೆ ಹಿಡಿಹೂವನ್ನು ಚೆಲ್ಲುತ ದಶರಥ ಸುತನ ನಡೆತಂದು ಹೊಂಬಣ್ಣದ ಅರಶಿಣವ ಕಲಸಿ ತುಂಬಿದರು । ಹರಿವಾಣದಲ್ಲಿ ಅಂಬುಜ ಪೀತ ಶ್ರೀರಾಮರಿಗೆ । ಜಯ ಜಯ ರಾಮ ಜಯರಾಮ । ತುಡುಕುವ ತಮ್ಮಟ್ಟೆಗಳು ಭೇರಿ ನಿರಾಶೆಗಳು ಒಡನೆ ಕೂಗುವ ಕೊಂಬುಗಳು, ಸಿಡಿಲಂತೆ ಗರ್ಜಿಸುವ ಪಂಚಮ ವಾದ್ಯಗಳು ತುಂಬಿದವು । ಜನಕನ ಅರಮನೆಯಲ್ಲಿ ದಿಕ್ಕು ದಿಕ್ಕಿನ ರಾಯರುಗಳಿಗೆ ರತ್ನ ಗಂಬಳಿಯನ್ನು ಹಾಸಿ ಸತ್ಕರಿಸಿದರು। ಜಯ ಜಯ ರಾಮ ಜಯರಾಮ । ಬ್ರಹ್ಮ, ಹರಿಹರ, ಇಂದ್ರರು ವಿಸ್ತಾರದ ಮಂಟಪದಲ್ಲಿ ಸೇರಿ ಹರುಷದಲ್ಲಿ ಹರಿಸಿದರು ಮಣಿ ಮಂಟಪದಲ್ಲಿ ಹಸೆಗಿಕ್ಕಿ ಕನಕದ ಮಣಿಯನ್ನು ತಂದಿರಿಸಿ ಇನಕೂಲ ರಾಮನ ಹಸೆಗೇಳೆನ್ನು ವಿನಯದಿಂದ ಕೌಶಲ್ಯ ಕರೆದಂದಳಾಗ। ಜಯ ಜಯ ರಾಮ ಜಯರಾಮ । ಬೇಗದಿ ಉಡುಗೆಯ ಹಾಸಿ ಆಗಲೇ ಉಪಚಾರ ಮಾಡಿ ಭಾಗ್ಯದಾರತಿಯ ಬೆಳಗಿದವರು. । ಪಾರ್ವತಿ ಸಹಿತ ನಾರಾಯಣನರಸಿ ಸೀತರಾಮರಿಗೆ । ಜಯ ಜಯ ರಾಮ ಜಯರಾಮ ।

ಇ) ನಿಳಬಲಾಂಗತ ನೀಲನೇ ಜೌಂಗತ ಪಾಲನ ನೀಲಾಗೋಪಾಲ ದುರುಳತನದಿ ಪಾಲ್ ಮೊಸರನು ಕುಡಿಸುತ ಕರದಿಂದಲಿ ಅರಶಿಣ ಕರೆಗೂಡಿ ॥ನೀಲ॥ ಶೀಲನ ಪಾಲ ಗೋಪಾಲ ಮಗಲ ಗುಂಡಿಸಲರುಚಿ ನಿಗಲವು ವಿಚಿತ್ರ ಮಲಗತ ಪೂಸುವ ಚೌವಳವ ಪಾಲವ ಶೀಲಗೋಪಾಲ ಅರಶಿಣ ಹಚ್ಚುವ ನೆರೆನೋಡಿ ॥ನೀಲ॥ ತಿಣ್ಣಿಕೋಲ ಚೆಂಡು ಬಣ್ಣದ ಬುಗುರಿಯ ಮನ್ನಣೆ ಕಗಳಿನೊಳ್ ಚಿಣ್ಣೆ ತಿಂದ ಕೈಗೆ ಅರಶಿಣ ಹಚ್ಚುವೆ ನೆರೆನೋಡಿ ॥ನೀಲ॥ ಪಾಲನ ಶೀಲಾ ಗೋಪಾಲ ಮಳೆಗಾಲದ ನೀಗದಿ ಲೇಶವು ಜಾಲಗಿರಿ ತಾಟವಿದವು ಕಾಲಿಗೆ ಪೂಸುವೆವು ಅರಶಿಣವ ॥ನೀಲ॥ ಪಾಲನ ಶೀಲ ಗೋಪಾಲ.॥

ಈ) ಶಿವ ಶಿವ ಜಯ ಜಯ ಶ್ರೀಗೌರಿ ಮನೋಹರ ತಾರುಣ್ಯಾ ಸಾಗರ ಕರುಣಾವ ಪತಿಯೇ । ಮದುವೆಯ ಮಂಟಪಕ್ಕೆ ಕದಳಿಯ ಕಂಬಗಳ ರಕ್ಷಿಸಿ ಪದ್ಮದ ಪಟ್ಟಿಗಳ ಬಿಗಿದಿರಿಸಿ ಅಲಂಕರಿಸಿದರೆ ಮನೋಹರ ಶಂಕರನ ॥ ಶಿವ ಶಿವ ॥

ಮುತ್ತಿನ ಚಪ್ಪರದ ಮಧ್ಯದಲ್ಲಿ ಮುತ್ತಿನ ಹಸೆ ಬರೆದು ಮುತ್ತಿಟ್ಟು ಕುಳ್ಳಿರಲು ಕರುಪುರದ ವೀಳ್ಯಗಳ ಕೊಟ್ಟು ಅಲಂಕರಿಸಿದರೆ ಮನೋಹರ ಶಂಕರನ ॥ ಶಿವ ಶಿವ ॥

ಭೇರಿ ಕಹಳೆಗಳಿಂದ ಬೋರಿಡುವ ವಾದ್ಯಗಳಿಂದ ನಾರಿಯರ ಶೋಬಾನಗಳಿಂದ ಅಲಂಕರಿಸಿದರೆ ಮನೋಹರ ಸಾಗರ ॥ ಶಿವ ಶಿವ ॥

ಮುತ್ತಿನ ಮಂಟಪದಲ್ಲಿ ಚಿನ್ನದ ಮುಕ್ಕಾಲು ಮಡಗಿರಿಸಿ ಚಿನ್ನದ ತಟ್ಟೆಲ್ಲಿ ಅರಶಿಣ ಎಣ್ಣೆಯ ಕಲಸಿಟ್ಟು ॥ ಶಿವ ಶಿವ ॥

ಹಸ್ತಿನಿ ಪದ್ಮಿನಿ ಶಂಕಿಣಿ ಎಲ್ಲಾರು ಕೂಡಿ ಅರಶಿಣ ಎಣ್ಣೆಯ ಮಾಡ ಬನ್ನಿರಿ ॥ ಶಿವ ಶಿವ ॥

ಆಯುಳ್ಳ ಅರಶಿಣ ಚಾಯುಳ್ಳ ಎಣ್ಣೆಯ ಎಣ್ಣೆಗೂ ಅರಶಿಣಕ್ಕೂ ರಜ ಒತ್ತಿ ರಜ ಮುಖಕ್ಕೆ ತೀಡಿದರೆ ॥ ಶಿವ ಶಿವ ॥

**2. ಮುಖ ಕ್ಷೌರ ಮಾಡುವಾಗ ಹೇಳುವ ಹಾಡು :**

ಅಂಗಳ ಸಾರಿಸಿ ರಂಗೋಲೆ ಬರೆದಿರಿಸಿ ರಾಯವಣ್ಣಯ್ಯನ ಚವರಕ್ಕೆ। ಮಂಟಪ ಸಾರಿಸಿ ಚಿತ್ತಿರ ಬರೆದಿರಿಸಿ ರಾಯವಣ್ಣಯ್ಯನ ಚವರಕ್ಕೆ॥ ರಾಯವಣ್ಣಯ್ಯನ ಚವರದ ಕೆಲಸಕ್ಕೆ ನಾದಿಗಿಲ್ಲದೆ ಮದುವಿಲ್ಲ। ನಾದಿಗನ ಹೇಳಲಿಕೆ ಯಾರ್‍ಯಾರು ಹೋಗಬೇಕು. ಏಳಾಳಿಗಿಂತ ಹಿರಯಣ್ಣ ॥ ಸಮರಾತ್ರಿಲೆದ್ದು ಕೆನೆ ಮೊಸರೂಟವ ಮಾಡಿ ನಾದಿಗರ ಮನೆಗೆ ಹೊರಟಾಗ ಅಣ್ಣಯ್ಯ ನಾದಿಗೆ ನಾದಿಗೆನೆಂದು ಕರೆದನ ॥ ಒಂದು ಕರೆವಾಗ ಆಲಿಸಾನು ನಾದಿಗ । ಎರಡೊಮ್ಮೆ ಕರೆವಾಗ ಓ ಎಂದು ಓ ಗೊಂಡು ಕೈಯೆತ್ತಿ ಸರಣೆ ಮಾಡಿದಾನು ॥ ಏನಾಗಿ ಬಂದಿರಿ ಸ್ವಾಮಿ ಎಂತದಾಗಿ ಬಂದಿರಿ, ಬಂದ ಕಾರ್ಯಗಳ ತಿಳಿದೇಳಿ। ನಾಳೆ ನಮ್ಮೂರಮನೇಲಿ ಕಂದಯ್ಯಗೆ ಶೋಬಾನೆ ನಾದಿಗನಿಲ್ಲದೆ ಮದುವಿಲ್ಲ। ಬರುತ್ತೇನೆ ನಮ್ಮ ಸ್ವಾಮಿ ಬರುತ್ತೇನೆ ನಮ್ಮ ಸ್ವಾಮೀ। ಕೈಯೆತ್ತಿ ಸರಣೆ ಮಾಡಿದಾನು। ಸಮರಾತ್ರಿಲೆದ್ದು ಕೆನೆ ಮೊಸರೂಟ ಮಾಡಿ। ಚಿನ್ನದುಪುಗಳ ತೆಗೆದಾನು। ಚಿನ್ನದುಪುಗಳ ತೆಗೆದಾನು ನಾದಿಗೆ ಮದುವೆಯ ಮನೆಗೆ ನಡೆದಾನು ॥ ಆಗ್ಲೆ ಬರಹೇಳಿ ಬಹಳ ತಡವಾಯ್ತು ಪ್ರೀತ್ಯಿಲ್ಲೋ ನಿನಗೆ ಮನದಲ್ಲಿ। ಆಗಲೆ ಬಂದೇನು ಬಾಗಲಲ್ಲಿ ನಿವೇನು ಬಾಗಿಲದವರೆನ್ನ ತಡದಾರು। ಬಾಗಿಲದವರೆನ್ನ ತಡೆದು ಮಾತನೆ ಆಡಿ ಅಲ್ಲೋಂದರಗಳಿಗೆ ತಡವಾದೋ ॥ ಅಲ್ಲೊಂದರಗಳಿಗೆ ತಡವಾದೊ ದೊರೆಗಳಿರ, ಪ್ರೀತ್ಯುಂಟು ನನಗೆ ಮನದಲ್ಲಿ। ಪ್ರೀತ್ಯುಂಟು ನನಗೆ ಮನದಲ್ಲಿ ದೊರೆಗಳಿರ ಚವರದ ಕೆಲಸ ಬೇಗನಾಗ್ಲಿ । ಒಂದು ಚಿನ್ನಕ್ಕೆ ಒಂಭತ್ತು ಸುತ್ತಿನ ಕೋಟೆ ಸುತ್ತಿನೊಳಗೆ ಮುಖತೋರೆ ॥ ಸುತ್ತಿನೊಳಗೆ ಮುಖತೋರೆ ಅಣ್ಣಯ್ಯ ಚವರದ। ಕೆಲಸ ಜತನಾಗ್ಲಿ। ಹನ್ನೆರಡು ಚಿನ್ನಕ್ಕೆ ಹನ್ನೆರಡು ಸುತ್ತಿನ ಕೋಟೆ ಸುತ್ತಿನೊಳಗೆ ಮುಖತೋರೆ ಅಣ್ಣಯ್ಯ

ಚವರದ ಕೆಲಸ ಜತ್ತನಾಗ್ಲಿ ॥ ಬಲಗೆನ್ನೆ ಒತ್ತುವರು ಬಲಗೆನ್ನೆಗೆ ಮಿಂಚಿಸುವಾನು । ಬಲಗೆನ್ನೆ ಒಳಗೆ ಕಸಕಪ್ಪು । ಬಲಗೆನ್ನೆಯೊಳಗೆ ಕಸಕಪ್ಪುವುಳಿದಾರೆ ಅಕ್ಕಿಯ ವಾಜ ನಿನಗಿಲ್ಲ ॥ ಕೈ ಉಗುರೊತ್ತುವನು ಕೈ ಉಗುರಿಗೆ ಮಿಂಚಿಡುವನು ಕೈ ಉಗುರಿನೊಳಗೆ ಕಸಕಪ್ಪು) ಕೈ ಉಗುರಿನೊಳಗೆ ಕಸಕಪ್ಪುವುಳಿದಾರೆ ಹಣದ ವಾಜ ನಿನಗಿಲ್ಲ ॥ ಕಾಲುಗುರಿನೊಳಗೆ ಕಸಕಪ್ಪುವುಳಿದಾರೆ ವಸ್ತ್ರದ ವಾಲ ನಿನಗಿಲ್ಲ । ಬಲಗೆನ್ನೆ ಒತ್ತುವರು ಬಲಗೆನ್ನೆಗೆ ಮಿಂಚಿಡುವೆನು । ಬಲಗೆನ್ನೆಯೊಳಗೆ ಕಸಕಪ್ಪು ಬಿಡೋನಲ್ಲ । ಬಲಗೆನ್ನೆಯೊಳಗೆ ಕಸಕಪ್ಪು ಬಿಡೋನಲ್ಲ । ಅಕ್ಕಿಯ ವಾಜ ನನಗುಂಟು ॥ ಕೈ ಉಗುರೊತ್ತವೆನು ಕೈ ಉಗುರಿಗೆ ಮಿಂಚಿಸುವೆನು । ಕೈ ಉಗುರಿನೊಳಗೆ ಕಸಕಪ್ಪು ಬಿಡೋನಲ್ಲ । ಕೈ ಉಗುರಿನೊಳಗೆ ಕಸಕಪ್ಪು ಬೀಡೊನಲ್ಲ ಹಣದ ವಾಜ ನನಗುಂಟು ಕಾಲುಗುರೊತ್ತುವೆನು ಕಾಲುಗುರಿಗೆ ಮಿಂಚಿಸುವೆನು ಕಾಲುಗುರಿನಲ್ಲಿ ಕಸಕಪ್ಪು ಬೀಡೋನಲ್ಲ । ಕಾಲುಗುರಿನಲ್ಲಿ ಕಸಕಪ್ಪು ಬೀಡೋನಲ್ಲ ವಸ್ತ್ರದ ವಾಜ ನನಗುಂಟು ॥

> ನ್ಯಾಯ ಮತ್ತು ಧರ್ಮಯುಕ್ತನಾಗಿರುವ ಶತ್ರುವು ಅನ್ಯಾಯ ಅಧರ್ಮಯುಕ್ತ ಮಿತ್ರನಿಗಿಂತಲೂ ಉತ್ತಮನು.
>
> – **ಪಂಚತಂತ್ರ**

# ಆರತಿ ಹಾಡುಗಳು

**3. ಅ) ಸ್ನಾನ ಮಾಡಿ ಬರುವಾಗ ಹೇಳುವ ಆರತಿ ಹಾಡು :**

ಮುತ್ತಿನ ಮಣಿಮಂಟಪ ಮಧ್ಯದಲ್ಲಿ । ಸ್ವಾಮಿ ಶ್ರೀರಾಮಚಂದ್ರ ಮಡದಿ ಜಾನಕಿ ನಿಂತಿರಲು । ಸತಿ ಪತಿಗೂ ಅಂಗನೆ ಸೀತೆಗೂ ಮುತ್ತಿನಾರತಿಯ ಬೆಳಗಿರೆ॥ ಚಿನ್ನದ ಮಣಿಮಂಟಪ ಮಧ್ಯದಲ್ಲಿ । ಸ್ವಾಮಿ ಶ್ರೀರಾಮಚಂದ್ರ ಮಡದಿ ಜಾನಕಿ ನಿಂತಿರಲು । ಸತಿ ಪತಿಗೂ ಅಂಗನ ಸೀತೆಗೂ ಚಿನ್ನದಾರತಿಯು ಬೆಳಗಿರೆ ॥ ಹವಳದ ಮಣಿಮಂಟಪದ ಮಧ್ಯದಲ್ಲಿ । ಸ್ವಾಮಿ ಶ್ರೀರಾಮಚಂದ್ರ ಮಡದಿ ಜಾನಕಿ ನಿಂತಿರಲು । ಸತಿ ಪತಿಗೂ ಅಂಗನೆ ಸೀತೆಗೂ ಹವಳದಾರತಿಯು ಬೆಳಗಿರೆ ॥

**ಆ) ಅಕ್ಕಿ ಆರತಿ :**

ಶ್ರೀ ತುಳಸಿ ಮಧ್ಯದೊಳಗಿರುವ ಕೃಷ್ಣನ ಬಳಸಿ ನೋಡುವ ಬನ್ನಿರೇ । ಮಂಗಳಾರತಿ ತಂದು ಬೆಳಗಿರೆ ರಂಗನಾಥ ಪ್ರಿಯೆಗೆ । ಸ್ವಾಮಿ ರಂಗನಾಥನ ಪ್ರಿಯೆಗೆ ॥ ಸ್ವಾಮಿ ರಂಗನಾಥ ಪ್ರಿಯೆಗೆ ॥ ಕಡಲಸುತ ಪಿಡಿದು ಬಲು ಬೆಡಗಿನಿಂದರೆ ಸ್ವಾಮಿ । ಬಲು ಬೆಡಗಿನಿಂದರೆ ಬರುವುದೇ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ । ಸ್ವಾಮಿ ರಂಗನಾಥನ ಪ್ರಿಯೆಗೆ ॥ ಬಿಲ್ಲ ಹಬ್ಬಕ್ಕೆ ಅಲ್ಲಿ ಹೋಗಿ ಮಾವ ಕಂಸನ ಕೊಂದಿರೆ। ಸ್ವಾಮಿ ಮಾನ ಕಂಸನ ಕೊಂದಿರೇ ಮಂಗಳಾರತಿ ತಂದು ಬೆಳಗಿರೆ ರಂಗನಾಥ ಪ್ರಿಯೆಗೆ । ಸ್ವಾಮಿ ರಂಗನಾಥನ ಪ್ರಿಯೆಗೆ ॥ ಹಾಸು ಮಂಚವ ಲೇಸು ತಲೆದಿಂಬು ಅಕ್ಕಿ ಹಾಸಿಗೆ ಹಾಸಲೇ । ಮಂಗಳಾರತಿ ತಂದು ಬೆಳಗಿರೆ ರಂಗನಾಥನ ಪ್ರಿಯೆಗೆ । ಸ್ವಾಮಿ ರಂಗನಾಥನ ಪ್ರಿಯೆಗೆ ॥

**ಇ) ಆರತಿ ಹಾಡು :**

ನೀರಜಭವೆಗೆ ಆರತಿಯ ಸೇರಿ ಬೆಳಗಿರೆ। ಕ್ಷೀರವಾರಿಧೀಸುತೆಗೆ ಸಾರ ಸಾಕ್ಷಿಗೆ ನಾರವಾದಿ ಮುನಿರವಗೆ ಮಾರಜನಕನ ರಾಣಿಗೆ । ಉರಗವೇಣಿಗೆ ಮಧುರವಾಣಿಗೆ । ಅಂಗಜಾತ ಜನನಿಗೆ ವರಭೃಂಗ ಕುಂತಳೆಗೆ । ನಿತ್ಯ ಮಂಗಳಾಂಗಿಗೆ ಆರತಿಯ ಸೇರಿ ಬೆಳಗಿದೆ ।

**ಈ) ಆರತಿ ಹಾಡು :**

ಮಂಗಳಾರತಿ ಎತ್ತಿದರು ರಂಗೆಯರು ರಂಗನಾಥನಿಗೆ । ಸಂಭ್ರಮದಿಂದಲ್ಲಿ ಮೂರು ಲೋಕವನ್ನು ಒಲಿದು ಪಾಲಿಸುವವಗೆ ನೀಲಮೇಘ ಶ್ಯಾಮಗೆ ಕರುಣಪಾಲ ಕಮಲನಾಭಗೆ । ಸುರಚೀರ ಗಂಭೀರ ಹರಿಗೆ । ರಂಗನಾಥಗೆ ಜಗನ್ನಾಥಗೆ ಮಂಗಳಾರತಿ ಎತ್ತಿದರು ರಂಗನಾಥಗೆ.

ಉ) ಆರತಿ ಬೆಳಗುವ ಹಾಡು :

ಆಲದೆಲೆಯ ಮೇಲೆ ಲೋಲನಾಡುತ್ತಾ ಬಂದ ಲೋಲಾಕ್ಷಿ ಶಿವನಿಗೆ ಪತಿಯಾಗಬೇಕೆಂದು ಎತ್ತಿದಳಾರತಿಯ ಶ್ರೀ ಸತ್ಯಭಾಮೆಗೆ ಬೆಳಗಿದಳಾರತಿಯ ಮಾನ ಕಂಸನ ಕೊಂದು ಮಂಗಳಾಕ್ಷೆ ಶಿವನಿಗೆ ಪತಿಯಾಗಬೇಕೆಂದು॥ ಎತ್ತಿದಳಾರತಿಯ ॥ ಶ್ರೀ ಸತ್ಯಭಾಮೆಗೆ ಬೆಳಗಿದಳಾರತಿಯ ॥ ಸಂಗರೆಲ್ಲಾ ಕೂಡಿ ಸಂಗೀತವ ಹಾಡಿ ಸಂಗಳ ಶಿವನಿಗೆ ಪತಿಯಾಗಬೇಕೆಂದು ॥ಎತ್ತಿ॥ ಮುತ್ತೈದೆಯರೆಲ್ಲಾ ಕೂಡಿ ಮುತ್ತಿನ ಆರತಿಯ ಮುತ್ತಾಕ್ಷಿ ಶಿವನಿಗೆ ಪತಿಯಾಗಬೇಕೆಂದು ಎತ್ತಿದಳಾರತಿಯ ಶ್ರೀ ಸತ್ಯಭಾಮೆಗೆ ॥ ಬೆಳಗಿದಳಾರತಿಯ ॥

ಊ) ವಧುವರರಿಗೆ ಅಕ್ಕಿ ಆರತಿ :

ಚೆಲ್ಲಿರೇ ಮಲ್ಲಿಗೆಯ ನೀವೆಲ್ಲರೂ ಸೇರಿ ಮದುಮಕ್ಕಳ ತಲೆ ತುಂಬ ಚೆಲ್ಲಿರೇ ಮಲ್ಲಿಗೆಯ ॥ ವಲ್ಲಾಕ್ಷಿಯರೆಲ್ಲರೂ ಸೇರಿ ಉಲ್ಲಾಸನ ಮೇಲೆ ಚೆಲ್ಲಿರ ಮಲ್ಲಿಗೆಯ । ನೀವೆಲ್ಲರೂ ಸೇರಿ ಚೆಲ್ಲಿರೇ ಮಲ್ಲಿಗೆಯ । ಕಡಗ ಕಂಕಣದಿಂದ ಬಂದ ಉಡುಪಿ ಶ್ರೀಕೃಷ್ಣನ ಮೇಲೆ ಚೆಲ್ಲಿರೇ ಮಲ್ಲಿಗೆಯ । ದೇವಲೋಕದಿಂದ ಬಂದ ದೇವಪ್ಪಯನ ಮೇಲೆ ಚೆಲ್ಲಿರೇ ಮಲ್ಲಿಗೆಯ । ದೇವಲೋಕದಿಂದ ಬಂದ ನಾರದ ಮುನಿಯ ಮೇಲೆ ಚೆಲ್ಲಿರೇ ಮಲ್ಲಿಗೆಯ । ಗಂಧ ಪರಿಮಳದಿಂದ ತುಂಬಿದ ಸುಂದರ ಬಾಲಯ್ಯನ ಮೇಲೆ ಚೆಲ್ಲಿರೇ ಮಲ್ಲಿಗೆಯ ನೀವೆಲ್ಲರೂ ಸೇರಿ ಚೆಲ್ಲಿರೇ ಮಲ್ಲಿಗೆಯ ॥

4. ಅ) ಹಸೆ ಬರೆಯುವ ಹಾಡು :

ಅಪ್ಪಾ ಮಕ್ಕಳು ಕೂಡಿ ತುಪ್ಪ ಬೋನವನುಂಡು ಉಕ್ಕಿನುಳಿ ಬಾಜು ಹೆಗಲೇರಿ। ಉಕ್ಕಿನುಳಿಬಾಜು ಹೆಗಲೇರಿ ಹೊರಟಾರು ಒಳ್ಳೊಳ್ಳೆ ಮಣೆ ಕಡಿವ ಕೆಲಸಕ್ಕೆ ॥ ಅಣ್ಣಾ ತಮ್ಮಂದಿರು ಕೂಡಿ ಹಾಲು ಬೋನವನುಂಡು ಚಿನ್ನಾದುಳಿಬಾಜು ಹೆಗಲೇರಿ ಚಿನ್ನಾದುಳಿಬಾಜು ಹೆಗಲೇರಿ ಹೊರಟಾರು ಒಳ್ಳೊಳ್ಳೆ ಮಣೆ ಕಡಿವ ಕೆಲಸಕ್ಕೆ ॥ ಆಲದ ಮಣೆಗೇರಿ ಆರೇಳು ದಿನವಾದೊ ಆಲದ ಮಣೆಯಾಕೆ ಬರಲಿಲ್ಲಾ । ಆಲದ ಮಣೆಯಾಕೆ ಬರಲಿಲ್ಲ ಬೆಡಗಿನ ಮಣೆಯೂ ಊರಿಗೆ ಬಿಟ್ಟ ಹೋರಿನ ಹೊಡಕೊಡೀ । ಊರಿಗೆ ಬಿಟ್ಟ ಹೋರಿನ ನಾವೇಕೆ ಹೊಡಕೊಡಲೋ ಜಾಮರಲೆದ್ದು ಕೆಲಸಕ್ಕೆ ॥ ಹಲಸಿನ ಮಣೆಗೇಳಿ ಹತ್ತೆಂಟು ದಿನವಾದೊ ಹಲಸಿನ ಮಣೆಯಾಕೆ ಬರಲಿಲ್ಲಾ ಹಲಸಿನ ಮಣೆಯಾಕೆ ಬರಲಿಲ್ಲ ಬೆಡಗಿನ ಮಣೆಯು ಊರಿಗೆ ಬಿಟ್ಟ ಹಸುವ ಹೊಡಕೊಡೀ । ಊರಿಗೆ ಬಿಟ್ಟ ಹಸುವ ನಾವೇಕೆ ಹೊಡಕೊಡಲೋ ಸಮತಿಗದು ಮುಡಿದಾಗ ಬೆಳಗಾದೋ॥ ಗಂಧದ ಮಣೆಗೇಳಿ ತಿಂಗಳು ದಿನವಾದೋ ಗಂಧದ ಮಣೆಯಾಕೆ ಬರಲಿಲ್ಲಾ ಗಂಧದ ಮಣೆಯಾಕೆ

ಬರಲಿಲ್ಲ ಬೆಡಗಿನ ಮಣೆಯು ಊರಿಗೆ ಬಿಟ್ಟೆಮ್ಮ ಹೊಡಕೊಡೀ । ಊರಿಗೆ ಬಿಟ್ಟೆಮ್ಮ ನಾವೇಕೆ ಹೊಡಕೊಡಲೋ ಮಲ್ಲಿಗೆಯ ಮುಡಿದಾಗ ಬೆಳಗಾದೋ ॥ ಹಸೆ ಬರವ ಕೋಣೇಲಿ ಏನುಂಟು, ಏನಿಲ್ಲ, ಹಣ್ಣಡಿಕೆ ಸಿಪ್ಪೆ ಮೊದಲಿಲ್ಲಾ। ಹಣ್ಣಡಿಕೆ ಸಿಪ್ಪೆ ಮೊದಲಿಲ್ಲದ ಕೋಣೇಲಿ ಹಸೆ ಬರೆದ ಕೋಣೆ ಬಲು ಇಂಬು ॥ ಹಸೆ ಬರೆದ ಜಗುಲಲ್ಲಿ ಏನುಂಟು ಏನಿಲ್ಲ ಯಾಲಕ್ಕಿ ಸಿಪ್ಪೆ ಮೊದಾಲಿಲ್ಲ । ಯಾಲಕ್ಕಿ ಸಿಪ್ಪೆ ಮೊದಲಿಲ್ಲದ ಜಗುಲಲ್ಲಿ ॥ ಹಸೆ ಬರೆದ ಜಗುಲಿ ಬಲು ಇಂಬು ॥ ಹಸೆಯ ಮೇಲೆರಡು ಕಳಸವ ತಂದಿಡಿರಿ, ನಡೆದ ಮಗಳಿಗೂ ಮಹಾದೇವಂಗೂ ಬಾಸಿಂಗದ ಬಣ್ಣ ಬರೀರಣ್ಣಾ । ಹಸೆಯ ಮೇಲೆರಡು ಹಸೆಮಣೆ ತಂದಿಡಿರಿ ನಡೆದ ಮಗಳಿಗೂ ಮಹಾದೇವಂಗೂ ತುಂಡಲು ಬಣ್ಣಾ ಬರೀರಣ್ಣಾ ॥ ಹಸೆಯ ಬರಿಯಲಿಕೆ ಋಷಿಗಳು ನಾವು ಬಂದಿದ್ದೇವೆ ಚಂದಾಗಿ ಬರೆಯಿರಿ ಚೌಕಾಗಿ । ಹಸೆಯ ಬರೆಯಲಿಕೆ ಇನ್ನಾರು ಬರಬೇಕು ತಾಯಿ ಸೋದರರದ ಹಿರೀ ಬಾವ । ತಾಯೀ ಸೋದರರದ ಹಿರೀ ತಾಯಿ ಸಹೋದರಿ ಬಾವ ಬರಬೇಕೆಂದು ಚಂದಾಗಿ ಬರೆಯಿರಿ ಚೌಕಾಗಿ ॥ ಸೂರ್ಯ ದೇವ ಅಕ್ಕ ಬರುತ್ತಾಳೆಂದು ಚಂದಾಗಿ ಬರೆಯಿರಿ ಚೌಕಾಗಿ । ಚಂದ್ರದೇವರ ತಂಗಿ ಬರುತ್ತಾಳೆಂದು ಚಂದಾಗಿ ಬರೆಯಿರಿ ಚೌಕಾಗಿ ॥ ಬಣ್ಣ ಬರೀರಣ್ಣ ಈ ಬಣ್ಣ ಬರೀರಣ್ಣಾ ಸೂರ್ಯ ದೇವರ ಬಣ್ಣಾ ಬರೀರಣ್ಣಾ। ಆ ಬಣ್ಣ ಬರೀರಣ್ಣಾ ಈ ಬಣ್ಣ ಬರೀರಣ್ಣಾ ಚಂದ್ರದೇವರ ಬಣ್ಣ ಬರೀರಣ್ಣಾ । ಗಿಳಿರಾಮರ ಬಣ್ಣ ಬರೀರಣ್ಣಾ ಚಂದಾಗಿ ಬರೆಯಿರಿ ಚೌಕಾಗಿ ॥ ಮಾವನವರ ಮನೇಲಿ ಬಾವ ಮೈದುನರು ಬಲು ಹೆಚ್ಚು ಹಸೆನೋಡಿ ನಿಮ್ಮ ಜರೆದಾರು । ಅತ್ತೆಯ ಅರಮನೇಲಿ ಅತ್ತಿಗೆ ನಾದಿನಿಯರು ಬಲು ಹೆಚ್ಚು ಹಸೆನೋಡಿ ನಿಮ್ಮ ಜರೆದಾರು । ಚಂದಾಗಿ ಬರೆಯಿರಿ ಚೌಕಾಗಿ॥ ಹಸೆ ಬರೆದವರಿಗೆ ಏನೆಲ್ಲಾ ಉಂಬಳಿ । ಸಣ್ಣಕ್ಕಿ ಬಯಲು ಸಮಾ ಉಂಬಳಿ । ಹಸೆ ಬರೆದವರಿಗೆ ಏನೆಲ್ಲಾ ಉಡುಗೊರೆ? ಸಾಲು ಪಟ್ಟೆಗಳು ಸಮಾ ಉಡುಗೊರೆ । ಹಸೆಯ ಬರೆದವರಿಗೆ ಏನೆಲ್ಲಾ ವೀಳ್ಯಗಳು ? ತಟ್ಟೇಲಿ ವೀಳ್ಯವ ಮಡಾಗಿರಿ ॥

**ಆ) ಹಸೆ ಬರೆಯುವ ಹಾಡು :**

ಮುತ್ತಿನ ಮಂಟಪದಲ್ಲಿ ಸ್ತ್ರೀಯರು ಐವರು, ಸರಿಯಾಗಿ ಹಸೆಯ ಬರೆದಾರು ।
ಸರಿಯಾಗಿ ಹಸೆಯ ಬರೆದಾರು ಬಾಲೆಯರು, ಸರಿದೇವಿ ಪತಿಯೇ ಹಸೆಗೇಳು॥
ಕಾಲುಂಗುರ ತಿರುಪಿಗೆ ಕಾಲುಂಗುರಗೆ ಗಿನಿರವದಿ, ಮೇಲೆ ದುಂದುಭಿ ಧ್ವನಿಯಲ್ಲಿ ।
ಮೇಲೆ ದುಂದುಭಿ ಧ್ವನಿಯಲಿ ಜಾನಕಿ ವನಜೆ ಜಾನಕಿ ಹಸೆಗೇಳು ॥
ಬಳಕಿ ಹೊಂಬಾಳೆ ಹೊಳೆಯುವ ಪದಕದ ಮೇಲೆ, ಮಲಕು ಮುತ್ತಿನ ಒಲಿಮಾಲೆ ।
ಮಲಕು ಮುತ್ತಿನ ಒಲಿಮಾಲೆ ಧರಿಸಿರುವ, ನಾರಿ ಜಾನಕಿ ಹಸೆಗೇಳು॥

ಗುಂಡು ಗುಲಗಂಜಿ ಸರವ ಗುಂಡು ಮುತ್ತಿನ ಸರವ, ಬಂದಿಯ ಮೇಲೆ ನವರತ್ನ।
ಬಂದಿಯ ಮೇಲೆ ನವರತ್ನ ಧರಿಸಿರುವ, ನಾರಿ ಜಾನಕಿ ಹಸೆಗೇಳು ॥
ಮುತ್ತಿನ ಮೂಗುತ್ತಿ ಮುಡಿದಂಡೆ ಹೂವು ಜಾಜಿ, ಜಾಜಿ ಮಲ್ಲಿಗೆ ತುರೂಬಿಗೆ ।
ಜಾಜಿ ಮಲ್ಲಿಗೆ ತುರುಬೀಗೆ ಸೀತಮ್ಮ, ಪುತ್ತಳಿ ಜಾನಕಿ ಹಸೆಗೇಳು ॥
ದಶರಥ ಧೀರಾಧಿಗಳ ನೆನಸಿಕೊಂಡು ಮನೆ ಮುಂದೆ, ಮನೆ ಮುಂದೆ ಸತಿಗೆದ್ದ ರಾಮ ಹಸೆಗೇಳು॥

ಇ) ಹಸೆಗೆ ಕರೆಯುವ ಹಾಡು :

ಬ್ರಹ್ಮನ ರಾಣಿಯು ಒಮ್ಮೆಗೆ ಬಲಗೊಂಡು ನಿರ್ಮಲ ಚಿತ್ತದಿ ಚರಣ ಕಮಲಗರಿಗೆ ಎರಗಿ ಪೇಳುವೇನು । ಚಿನ್ನದ ಹಾವಿಗೆ ಮೆಟ್ಟಿದ ಪಾದವು ಚೆನ್ನಾಗಿ ಮತಿಗಳ ಕರುಣಿಸು ಎಂದೆನುತ । ಚೆನ್ನಾಗಿ ಪಾದಕ್ಕೆರಗುವೆನು । ಎಡಬಲದಲಿ ಸೂರ್ಯ ಚಂದ್ರಗಳು ಹೊಳೆಯುವ ಜಡೆ ಬಂಗಾರಿನ ರಾಗೂಟಿಗೊಂಡೆಗಳು । ಅರಳು ಮಲ್ಲಿಗೆಯಂತೆ ಅರಸಗಳಾಡುತ್ತ ವರಗಳ ಕೊಡುವ ಶ್ರೀ ಪಾರ್ವತಿಯಮ್ಮನ ಬರಹೇಳಿ ಹಸೆಗೆ ಕರೆದಾರು । ಚಿನ್ನದ ಮಣಿ ಪಂಕಜಮುಖಿ ಅಳುವ ಶ್ರೀ ಪಾರ್ವತಿಯಮ್ಮನ ಬಿಂಕದಲಿ ಹಸೆಗೆ ಕರೆದಾರು । ಆನೆಯ ಸೊಂಡಿಲ ಹೋಲುವ ತೋಳಿಗೆ ಬಾಳೆಯ ಕುಪ್ಪಸ ಭುಜ ಕೀರ್ತಿ ಇಂತೊಪ್ಪುವ ತೋಳು ಬಳೆಯು ಏಳು ಪಾರ್ವತಿಯಮ್ಮ ನೀವು ನಿಸ್ತ್ರೀವರು ಹಸೆಗೆ ಕರೆದಾರು। ವೇಷದಿ ಬಾವಿಯ ಮೇಲೆ ವೇಷದಿ ಕುಳ್ಳಿರಲು ಹಸುಳೆ ಪಾರ್ವತಿದೇವಿ ಬಂದು ಭಜಿಸಿದವರಿಗೆ ವರಕೊಟ್ಟು ರಕ್ಷಿಸು ಪಾರ್ವತಿಯಮ್ಮ ನೀವು ನಿಸ್ತ್ರೀವರು ಹಸೆಗೆ ಕರೆದಾರು । ಕಾಶಿಯ ಪುರದಿಂದ ನೀವು ಬಂದು ನೀನೆಸಿದವರಿಗೆ ವರಗಳ ಕೊಟ್ಟು ಪುತ್ರ ಸಂತಾನವ ನೀವು ಕೊಟ್ಟು । ರಕ್ಷಿಸು ಪಾರ್ವತಿಯಮ್ಮ ನೀವು ವನಿತೆಯರು ಹಸೆಗೆ ಕರೆದಾರು ॥

ಈ) ಹಸೆಗೆ ಕರೆಯುವ ಹಾಡು :

ಹಸೆಗೆದ್ದು ಬಾ ನೀಲಮೇಘ ಶ್ಯಾಮ ಹಸೆಗೆದ್ದು ಬಾ । ಜನಕಾನ ಪುರಕೆ ಹೋಗಿ ಹರಧನುವ ಉರಿದ ದೇವ ಜಾನಕ್ಕಿಯ ಕರವ ಪಿಡಿದು ಭಕ್ತರನು ಪೊರೆದ ದೇವ । ಮಧುರೆಯಲ್ಲಿ ಪುಟ್ಟಿದನಂತೆ ಮಾವ ಕಂಸನ ಕೊಂದ ದೇವ ಮಾತಾಪಿತರ ಪೊರೆದ ದೇವ ಹಸೆಗೆದ್ದು ಬಾ ಶೃಂಗಾರ ಶೀಲನೆ ಸಂಗೀತ ಲೋಲನೆ ರಂಗನಾಯಕಿ ಸಹಿತ ತುಂಗಪೀಠಕ್ಕೆ ಬಾ ಅಂಗನೆಯ ಕೂಡಿ ಮಂಗಳವ ಪಾಡಿ ಮುತ್ತಿನಾಕ್ಷತೆಗಳ ನೆತ್ತಿಯೊಳಿಡುತಲಿ ರಂಗ ಬಾ ಎನ್ನುವರು ಹಸೆಗೆದ್ದು ಬಾ.

5) ಅಕ್ಕನ ಕರೆಯುವ ಹಾಡು :

ನಮ್ಮವರ ಮನೆಯಲ್ಲಿ ಸಣ್ಣವಂಗೆ ಸೋಬಾನ ಅಕ್ಕನ ಕರೆಯಲಿಕೆ ಹೋಗೋದಾರೂ ಅಕ್ಕನ ಕರೆಯಲಿಕೆ ಹೋಗೋದಾರು ತಂದೆಪ್ಪ । ಏಳಾಳಿಗಿಂತ ಹಿರಿಯಣ್ಣ ಹೋಗಬೇಕು ॥ ಮಗನೇ ಅಕ್ಕನ ಕರೆಯಲಿಕೆ ಹೋಗಬೇಕು ॥೧॥ ಸೂಡಿ, ಸೂಡಿ ವೀಳ್ಯವ ತೆಗೆದಾನು ಅಣ್ಣಯ್ಯ । ಕೀಲುಕೀಲೆ ಅಡಿಕೆ ತೆಗೆದಾನು । ಅಕ್ಕನ ಕರೆಯಲಿಕೆ ಹೊರಟಾನು ಅಣ್ಣಯ್ಯ । ವೀಳ್ಯವ ತೆಕ್ಕೊಂಡು ಹೊರಟಾನು। ಸಣ್ಣಕ್ಕಿ ಬಯಲಲ್ಲಿ ನಡೆದಾನು ಅಣ್ಣಯ್ಯ । ಅಕ್ಕಾನರಮನೆಗೆ ನಡೆದಾನು ॥೨॥ ಎದುರಿಗೆ ಹಾಲು ನೀರು ತಂದಾಳು ಹಿರಿಯಕ್ಕ ನೀರನ್ನೇ ತೆಗೆದು ಕೈ ಕಾಲು, ಮುಖ ತೊಳೆದು। ಹಾಲನ್ನೆ ತೆಗೆದು ಬಾಯಾರಿಕೆ ಕಳೆದು ತೂಗುವ ಮಂಚದಲ್ಲಿ ಕೂತಾನೀಗ ॥೩॥ ವೀಳ್ಯವ ಕೊಟ್ಟಾಳು ಅಕ್ಕಯ್ಯ ವೀಳ್ಯವನ್ನೀಗ ಮೆದ್ದಾನು । ಬೆಳ್ಳಿಯ ಹರಿವಾಣ ತೆಗೆದು ವೀಳ್ಯವ ನಿರಿಸಿದರು ಅಣ್ಣಯ್ಯ । ನಮ್ಮವರ ಮನೇಲಿ ಸಣ್ಣವಂಗೆ ಸೋಬಾನ ಕಳಸಕನ್ನಡಿ ಹಿಡಿಯಲಿಕೆ ಬರಬೇಕು ॥ ಕಳಸ ಕನ್ನಡಿ ಹಿಡಿಯಲಿಕೆ ಬರಬೇಕು ಅಕ್ಕಯ್ಯ ನಮ್ಮರಮನೆಗೆ ॥೪॥ ಕಡಿಕೆ ಭತ್ತವ ಬಿಟ್ಟು ತುಳುಕೆ ಹೊನ್ನನು ಬಿಟ್ಟು ನಾನೇಗೆ ಬರಲಿ ತಮ್ಮಾ ಮದುವೆಗೆ ॥ ಕಡಿಕೆ ಭತ್ತಕ್ಕೆ ಕಾವಲಿಗೆ ಜನಕೊಡುವೆ ಬಾರಕ್ಕ ಮನೆಯ ಮದುವೆಗೆ ॥೫॥ ದೇವರಂತ ಮಾವನ ಬಿಟ್ಟು ಪಶುವಿನಂತ ಅತ್ತೆಯ ಬಿಟ್ಟು ನಾನೇಗೆ ಬರಲಿ ತಮ್ಮಾ ಮದುವೆಗೆ ॥ ದೇವರಂತ ಮಾವಗೆ ಅತ್ತೆಯವರಿಗೆ ದಂಡಿಗೆ ನಾ ಕೊಡುವೆ, ಬಾರಕ್ಕ ನಮ್ಮರಮನೆಗೆ ॥ ಬಾಳೆಯ ಸುಳಿಯಂತ ಪುರುಷನ ಬಿಟ್ಟು। ಗೆಜ್ಜೆಕೋಲು ಕುವರನ ನಾ ಬಿಟ್ಟು ನಾನ್ಹೇಗೆ ಬರಲಿ ತಮ್ಮಾ ಮದುವೆಗೆ ॥೬॥ ಬಾಳೆಯ ಸುಳೊಯಂತ ಪುರುಷನಿಗೆ ಕುದುರೆಯ ನಾ ಕೊಡುವೆ ಬಾರಕ್ಕ ನಮ್ಮರಮನೆಗೆ ॥ ಕರೆಯುವರು ಯಾರಿಲ್ಲ ಕಾಸುಮರು ಯಾರಿಲ್ಲ । ನಾನ್ಹೇಗೆ ಬರಲಿ ತಮ್ಮಾ ಮದುವೆಗೆ ॥೭॥ ಒಂದು ವೀಳ್ಯವ ಕೊಡವಲ್ಲಿಂದ । ಎರಡು ವೀಳ್ಯವ ಕೊಟ್ಟು ನೆರೆಮನೆಯಕ್ಕಂದರಿ ಕರೆಸಿಕೊ ತಮ್ಮಾ ಮದುವೆಗೆ ಬರೋದಿಲ್ಲ ॥ ಆಕಾಶಕ್ಕೆ ಅಡಿಯುಂಟು ಅಕ್ಕಯ್ಯ । ಭೂಮಿಗೆದಾರುಂಟು । ನಿನ್ನ ಮಾತಿಗೆ ಎಣೆಯಿಲ್ಲಾ॥ ಅರಮನೆಯ ಮೆಟ್ಟಲನ್ನೆ ಇಳಿದಾನು ತಮ್ಮನ್ನು ತಿರುಗಿ ನೋಡದೆ ನಡೆದಾನು ಅರಮನೆಗೆ ॥೮॥ ತಾಯವ್ವ ಬಂದು ಕೇಳಿದಾಳು । ಅಕ್ಕ ಹಿರಿಯಕ್ಕ ಬರಲಿಲ್ಲ ಎಲೆ ಮಗನೆ॥ ಬರಲಿಲ್ಲವೆಂದು ಹೇಳಿದಾನು ನೆರೆಮನೆಗೆ ಹೋದಾನು ಅಣ್ಣಯ್ಯ । ಒಂದು ವೀಳ್ಯವ ಕೊಡುವಲ್ಲಿಂದ । ಎರಡು ವೀಳ್ಯವ ಕೊಟ್ಟು ಕಳಸ ಕನ್ನಡಿ ಹಿಡಿಯಲಿಕೆ ಬರಬೇಕು ॥ ಕಳಸ ಕನ್ನಡಿ ಹಿಡಿಯಲಿಕೆ ಬರಬೇಕು ಅಕ್ಕಂದಿರ ಹಾಗೆಂದು ಹೇಳಿ ಹೋದಾನೀಗ ॥ ಕಳಸ ಕನ್ನಡಿ ಹಿಡಿದಾರೀಗ ಅಕ್ಕಂದಿರು । ಕಳಸ ಕನ್ನಡಿ ಹಿಡಿದಾರು॥

ದಿಬ್ಬಣಾವನೆ ಹೊರಟಾರು । ಅಷ್ಟೆಂಬ ಹೊತ್ತಿನಲಿ ಗೆಜ್ಜೆ ಕಾಲು ಕುವರನು ಸುಂಟಿಯ ಸುಳಿಯ್ಹಾಗೆ ಬಳಕುತ । ಶಿಶುಬಾಲೆ ಬಾನ ತೆಕ್ಕೊಂಡು ಹೊರಟಾಳು ಅಕ್ಕಯ್ಯ ಅರಮನೆಗೆ ನಡೆದಾಳೂ॥ ಎದುರಿಗೆ ಹಾಲು, ನೀರು ಯಾರುವೆ ತರಾಲಿಲ್ಲ ಜನವಿಲ್ಲದವಳು ಈಗೇತಕೆ ಬಂದಿದ್ದಿನಿ ಮಗಳೆಡೇ ಕಡೆಕಣ್ಣು ಕೋಡಿ ಮುಖ ಬಿಟ್ಟಾಳು ಹಿರಿಯಕ್ಕಾ । ಎಲೆ ತಮ್ಮ ನೀ ಕೇಳು । ಗೆಜ್ಜೆ ಕಾಲು ಕುವರನು। ಸುಂಟಿಯ ಸುಳಿಯ್ಹಾಗೆ ಬಳುಕೂತ। ಹಾಗಾಗಿ ಬಂದೆ ಎಲೆ ತಮ್ಮ । ಕಳಸ ಕನ್ನಡಿ ಹಿಡಿಯಲಿಕೆ ಕೂಡಿ ನನಗೆ ॥೯॥ ಅದುವೇನೋ ಆಗೋದಿಲ್ಲ ಎಲೆಯಕ್ಕ ಒಂದು ವೀಳ್ಯವ ಕೊಡುವಲ್ಲಿಂದ ಎರಡು ವೀಳ್ಯವ ಕೊಟ್ಟು ನೆರೆಮನೆಯಕ್ಕಂದಿರಿಗೆ ಕಳಸ ಕನ್ನಡಿ ಹಿಡಿಯಲಿಕ್ಕೆ ಕೊಡಬೇಕು ॥ ಒಂದು ವೀಳ್ಯ ಕೊಡುವಲ್ಲಿಂದ ಅಕ್ಕಯ್ಯ ಎರಡು ವೀಳ್ಯವ ಕೊಟ್ಟು । ನೀನವರ ಪಾದಕ್ಕೆರಗಿ ಸರಣಾವ ಮಾಡಿ ಬೇಕಾದ್ದ ಬೇಡಿಕೋ ॥ ಒಂದು ವೀಳ್ಯವ ಕೊಡುವಲ್ಲಿಂದ ಎರಡು ವೀಳ್ಯವನ್ನೀಕ । ಕೊಟ್ಟಾಳು ಅಕ್ಕಯ್ಯ ಕೊಟ್ಟು ಸರಣಾವ ಮಾಡಿದಾಳು ॥೧೦॥ ಕೊಡಲಿಕ್ಕೆ ಹಿಡಿದ ಕಳಸ ಕನ್ನಡಿಯಿದುವಲ್ಲ । ಹೋಗಕ್ಕ ನಾನೀಗ ಕೊಡೋದಿಲ್ಲ ಕಡೆ ಕಣ್ಣ ಕೋಡಿ ದುಃಖ ಬಿಟ್ಟಾಳೀಗ ॥ ಅಕ್ಕಯ್ಯ ತಾಯಿಯ ಹತ್ತಿರ ನಡೆದಾಳು ॥ ತಾಯವ್ವ ನೀವು ಕೇಳಿ ಎಲೆ ತಾಯವ್ವ ನೀವು ಕೇಳಿ ಕಳಸ ಕನ್ನಡಿ ಕೊಢಿ ನನಗೆ ॥ ಎಲೆ ಮಗಳೆ ನೀ ಕೇಳು ಎಲೆ ಮಗಳೆ ನೀ ಕೇಳು । ಕಳಸ ಕನ್ನಡಿ ಕೊಡಿಸೋಕೆ ಆಗೋದಿಲ್ಲ ॥೧೧॥ ನಿನಗೆ ಐಶ್ವರ್ಯ ಸಿಕ್ಕತೆಂದು ಹೆಮ್ಮೆಯಲಿ ತಮ್ಮನ ಎಲ್ಲಿಗೂ ಕಾಣಲಿಲ್ಲ ॥ ನನ್ನಿಂದಾಗದ ಕೆಲಸವಿದು ಎಲೆ ಮಗಳೆ ನಿನ್ನ ತಂದೆ ಹತ್ತಿರ ಹೋಗಿ ಬೇಡಿಕೊಳ್ಳೀಗ ॥ ತಂದೆಪ್ಪನವರ ಪಾದ ಹಿಡಿದು ಸರಣಾವ ಮಾಡಿದಾಳು ಮಗಳು । ಕಡೆಕಣ್ಣ ಕೋಡಿ ದುಃಖ ಬಿಟ್ಟಾಳೀಗ ॥ ಬೇಸಾರವೇತಕ್ಕೆ ಮಗಳೆ ಒಂದು ಗೊನೆಯಿಂದೀಗ । ಒಂದೂವಾ ಹಣ್ಣು ಹೋಯ್ತೆಂದು ಮನದಲ್ಲಿ ನಾನು ನೆನದೇವು ॥೧೨॥ ಅದೇನು ಆಗಲಿಕ್ಕಿಲ್ಲ ತಂದೆಯವರೆ ಕಳಸ ಕನ್ನಡಿ ಹಿಡಿಯಲಕ್ಕೆ ಕೊಡಿಸಬೇಕು ॥ ಹರಿವಾಣ ತುಂಬ ವೀಳ್ಯದ ತೆಗೆದುಕೊ ನೀನು। ನೆರೆ ಮನೆಯ ಅಕ್ಕಂದಿರಿಗೆ ಕೊಟ್ಟು ಅವರ ಕಾಲು ಹಿಡಿದು ಸರಣಾವ ಮಾಡಿ ಕಳಸ ಕನ್ನಡಿ ಬೇಡಿಕೋ॥ ವೀಳ್ಯವನ್ನೀಗ ಕೊಟ್ಟು ಬೇಡಿದಾಳು ಅಕ್ಕಯ್ಯ ಕಳಸ ಕನ್ನಡಿ ಕೊಟ್ಟಾರೀಗ ॥ ॥೧೩॥ ಕಳಸ ಕನ್ನಡಯನ್ನೀಗ ಕೊಟ್ಟಾರು ನೆರೆಮನೆಯಕ್ಕಂದಿರು । ಕಳಸ ಕನ್ನಡಿ ಹಿಡಿದಾಳು ಹಿರಿಯಕ್ಕ ದಿಬ್ಬಣವನ್ನೆ ಹೊರಟಾರು ॥೧೪॥

**6. ದಿಬ್ಬಣ ಹೊರಡಿಸುವ ಹಾಡು :**

ಅರಮನೆ ಸಾರಿಸಿ, ರಂಗೋಲೆ ಬರದಿರಿಸಿ । ಮಗನ ಶೃಂಗರಿಸಿ ಒಳಗಿಂದ ತಾಯವ್ವ। ಚಿನ್ನದ ಪೆಟ್ಟಿಗೆ ತೆಗೆದಿರಿಸಿ । ಉಪ್ಪರಿಗೆ ಸಾರಿಸಿ ರಂಗೋಲೆ ಬರೆದಿರಿಸಿ । ಮಗನ ಶೃಂಗರಿಸಿ ಒಳಗಿಂದ ತಾಯವ್ವ। ಒಳಗಿಂದ ತಾಯವ್ವ ಹಣದ ಪೆಟ್ಟಿಗೆ

ತೆಗೆದಿರಿಸಿ ಏಳೇಳು ಚಂದ್ರನೇ ಏಳೇಳು ಚಂದ್ರನೇ ಏಳೇಳು ಗಂಭೀಗರುಡನೆ ಏಳೇಳೆಂದರೆ ಏಳುವರು ನಾನಲ್ಲ । ಸೋದರ ಅತ್ತೆ ಮಾವಂದಿರು ಬರಬೇಕು ॥೨॥ ಹಸೆ ಮೇಲಿನಿಂದ ಒಂದು ಓಲೆ ಬರೆದಾನು ಅಣ್ಣಯ್ಯ । ಓಲೆ ಕಂಡಾಕ್ಷಣ ಬರಬೇಕು ಅತ್ತೆ ಮಾವನವರೇ । ಕೂತಲ್ಲಿಂದ ಒಂದು ಓಲೆ ಕಳೂಗಿದ ॥೨॥ ಓಲೆಯ ತೆಕ್ಕೊಂಡು ಹೋದಾರು ಅಣ್ಣಯ್ಯ ಸಣ್ಣಕ್ಕಿ ಬಯಲಲ್ಲಿ ನಡೆದಾರು । ದೂರದಿಂದಲಿ ಮಾವನವರು ಅಳಿಯ ಬರುವುದ ಕಂಡು । ಎಡ ಹಾದಿಯಲ್ಲಿ ಹೋಗುತ್ತಾರೋ । ಬಲ ಹಾದಿಯಲ್ಲಿ ಬರುತ್ತಾರೋ ನಮ್ಮ ರಾಮ ಅರಮನೆಗೆ ॥೨॥ ಬೆಳ್ಳಿಯ ಕಿಂಡಿಗಳ ಬೆಳಗಿದರು ಅತ್ತೆಮ್ಮ । ಚಿನ್ನದ ಹರಿವಾಣ ಬೆಳಗಿದರು ॥ ಎದುರಿಗೆ ಹಾಲು ನೀರು ತೆಕ್ಕೊಂಡು ಹೋದಾಳು ಅತ್ತೆಮ್ಮ । ನೀರನ್ನೆ ತೆಗೆದು ಕೈ ಕಾಲು ಮುಖದೊಳೆದು ಹಾಲನ್ನೆ ತೆಗೆದು ಬಾಯಾರಿಕೆ ಕಳೆದಾನು । ತೂಗುವ ಮಂಚದಲ್ಲಿ ಕೂತಾರೀಗ ॥ ಏನಾಗಿ ಬಂದೀರಳಿಯ, ಎಂಥದಾಗಿ ಬಂದೀರಳಿಯ, ಬಂದಂಥ ಕಾರ್ಯ ತಿಳಿಯೊದೇಳಿ । ಓಲೆಯನ್ನೆ ತೆಗೆದು ಕೊಟ್ಟಾನು । ಓಲೆ ಓದಿ ನೋಡಿದರು ಮಾವನವರು ಬೇಗದಿಂದ ಓಲೆ ಓದಿದಾರು ॥ ಮಡದಿಯ ನೀ ಕೇಳೋ, ಮಡದಿಯೆ ನೀ ಕೇಳೊ ನೊರೊಂದು ಅನ್ನದಡಿಗೆ ಮಾಡು ಬೇಗ । ದೊಡ್ಡ ಮಾಳಿಗೆಯೊಳಗೆ ನಡೆದಾರು ಮಾವನವರು । ದೊಡ್ಡ ಪೆಟ್ಟಿಗೆ ತೆಗೆದಾರು । ಪೆಟ್ಟಿಗೆ ಕೀಲು ಸಡಿಲಿರಿಸಿ ಮಾವನವರು ಕೋಲ್ಕಂಬಿ ದೋತ್ರ ತೆಗೆದಾರು॥ ಮುದ್ರೆ ಮುಂಡಾಸು ತೆಗೆದು ಎರಕಾಗಿ ಇರುಸಿ ಅಳಿಯನರಮನೆಗೆ ಹೊರಟಾರು। ವಜ್ರದ ಕರಟುಗಳ ತೆಗೆದು ಭುಜನೇರಿ ಇಳುಸಿದಾರು, ಅಳಿಯನರಮನೆಗೆ ಹೊರಟಾರು ॥ ಆಳುದ್ದ ಕೋಲ್ಕೊಡೆ ಹಿಡಿದಾರು ಮಾವನವರು ಅಳಿಯನರಮನೆಗೆ ಹೊರಟಾರು ॥ ಅತ್ತೆಮ್ಮ ಎದ್ದಾರು ಸಣ್ಣ ಮಾಳಿಗೆಯೊಳಗೆ ನಡೆದಾರು । ಸಣ್ಣ ಪೆಟ್ಟಿಗೆ ತೆಗೆದಾರು ಅತ್ತೆಮ್ಮ । ಪೆಟ್ಟಿಗೆ ಕೀಲು ಸಡಿಲಿರಿಸಿ ಜರಿ ಬಂದ ಸೀರೆ ಉಟ್ಟಾರೀಗ । ಗುರುಗುಂಜಿ ಬಣ್ಣದ ರವಕೆಯ ತೊಟ್ಟಾರು ಅತ್ತೆಮ್ಮ । ಅಳಿಯನರಮನೆಗೆ ಹೊರಟಾರು ॥ ಮಂಡೆ ಬಾಚಿದರು ಮಲ್ಲಿಗೆ ಹೂವ ಮುಡಿದಾರು ಅತ್ತೆಮ್ಮ । ಅಳಿಯನರಮನೆಗೆ ಹೊರಟಾರು ॥ ಮುನ್ನಲ್ಲಿ ಮುನ್ನೂರು ವರಹ ಕಟ್ಟೇದಾರು ಮಾವನವರೂ ಅಳಯನರಮನೆಗೆ ಹೊರಟಾರೀಗ ॥ ಸೆರಗಲ್ಲ ಸೆರೆಹೊನ್ನ ಕಟ್ಟಿದಾರು ಅತ್ತೆಮ್ಮ ಅಳಿಯನರಮನೆಗೆ ಹೊರಟಾರು ॥ ಗೆಜ್ಜೆ ಕತ್ತಿಪನೆ ಕೊಡೆ ಹಿಡಿದಾರು ಅತ್ತೆಮ್ಮ ॥ ಅಳಿಯನರಮನೆಗೆ ಹೊರಟಾರು ॥ ಸಣ್ಣಕ್ಕಿ ಬಯಲಲ್ಲಿ ಹೊರಟುವೇ ಹೋದಾರು । ದೂರದಿಂದಲಿ ಅಳಿಯ ನೋಡುತ್ತಾನೆ ॥ ನನ್ನ ಅತ್ತೆ ಮಾವನರು ಸಣ್ಣಕ್ಕಿ ಬಯಲಲ್ಲಿ ಬರುತ್ತಾರೆ ॥ ಎದುರಿಗೆ ಹಾಲು ನೀರು ತೆಕ್ಕೊಂಡು ಹೋಗಿರೆಂದು ಕೂತಲ್ಲಿಂದ ಹೇಳಿದಾನು ।

ಎದುರಿಗೆ ಹಾಲು ನೀರುಗಳನ್ನೆಲ್ಲ ತಂದಾರೀಗ । ನೀರನ್ನ ತೆಗೆದು ಕೈ ಕಾಲು ಮುಖ ತೊಳೆದು ಹಾಲನ್ನ ತೆಗೆದು ಬಾಯಾರಿಕೆ ಕಳೆದಾರು। ತೂಗುವ ಮಂಚದಲಿ ಕೂತಾರೀಗ ॥ ಸೂಡಿ, ಸೂಡಿ, ವೀಳ್ಯವ ಹರಿವಾಣದೊಳಿರಿಸಿ ಮಾವಗೆ ವೀಳ್ಯದ ಕೊಡಿಸಿದರು । ವೀಳ್ಯವನ್ನ ಮೆದ್ದಾರು ಮಾವನವರು ದೊಡ್ಡ ಮಾಳಿಗೆಯೊಳಗೆ ನಡೆದಾರು ॥ ಮುನ್ನಿಂದ ಮುನ್ನೂರು ವರಹ ಬಿಚ್ಚಿದಾರು ಮಾವನವರು ಅಳಿಯನ ಸೆರಗಿಗೆ ಕಟ್ಟಿದಾರು । ಅತ್ತೆಮ್ಮ ಹೋದಾರು ಸೆರಗಿನಂದ ಸೆರಹೊನ್ನ ಬಿಚ್ಚಿ ಅಳಿಯನ ಸೆರಗಿಗೆ ಕಟ್ಟಿದಾರು ॥ ಏಳೇಳು ಇಂದ್ರನೇ ಏಳೇಳು ಚಂದ್ರನೇ ಏಳೇಳು ಗಂಭೀಗರೊಡನೆ। ಹಸೆ ಮೇಲಿಂದ ಎದ್ದಾನು ಮದುವಣ್ಣ । ಅಕ್ಕ ಬಾರಕ್ಕ ಕಳಸ ಕನ್ನಡಿ ಹಿಡಿ ನೀನು ಮುತ್ತಿನ ಮೆಟ್ಟು ಕಲ್ಲು ಇಳಿ ಮುಂದೆ ॥ ಅಕ್ಕ ಬಂದಾಳು । ಕಳಸ ಕನ್ನಡಿ ಹಿಡಿಯಕೆ ॥ ತಾಯವ್ವ ಎದ್ದಾರು ಕಳಸ ಕನ್ನಡಿ ತೆಗೆದು ಕೊಟ್ಟಾರು । ಮಗಳ ಕೈಯಲ್ಲಿ ಕೊಟ್ಟರೀಗ ॥ ಮುತ್ತಿ ಮೆಟ್ಟು ಕಲ್ಲು ಇಳುದಾಳು ಅಕ್ಕಯ್ಯ ಚಪ್ಪರದ ಒಳ ಮಧ್ಯ ಮುತ್ತಿನ ಮೇಲ್ಕಟ್ಟಿನಡಿಯಲಿ ದಿಬ್ಬಣ ಇಳಿದು ನಿಂತರೀಗ॥ ಹತ್ತು ಬೆರಳಿಗೆ ಕೆತ್ತಿಸಿದ ಉಂಗುರವನ್ನಿಟ್ಟು ತಂದೆಗೆ ವೀಳ್ಯ ಕೊಟ್ಟಾನು ॥ ತಂದೆ ಪಾದ ಹಿಡಿದು ಶರಣವ ಮಾಡಿದನು । ಆಯಸ್ಸು.... ಮಗನೇ ಭವಿಷ್ಯಕ್ಕೆ ದೊಡ್ಡವನಾಗು ಪುತ್ರನ ಫಲ ಪಡೆ ನೀನು ॥ ಹತ್ತು ಬೆರಳಿಗೆ ಕೆತ್ತಿಸಿದ ಉಂಗುರವನ್ನಿಟ್ಟು, ಮಾವನಿಗೆ ವೀಳ್ಯ ಕೊಟ್ಟಾನು ಮದುವಣ್ಣ ಮಾವ ಬುದ್ಧಿಯ ಹೇಳಿದಾರು॥ ಮಾವನವರ ಮನೇಲಿ ಬಾವಮೈದುನರು ಹೆಚ್ಚು । ಬಲು ಜೋಕೆಯಲಿ ಹೋಗಿ ಬರಬೇಕು ॥ ಕುದುರೆ ಮೇಲೇರಿದಾನು ಮದುವಣ್ಣ । ಹಿಂದೆ ತಿರುಗಿ ನೋಡಿದಾನು ಮುಂದೆ ಸಾಲದೆಂದು ಮೊಗಬಾಡಿ। ಮದುವಣ್ಣ । ರಾಗಿ ಕಾಳಂತೆ ರಾಜೆಲ್ಲ ನನ್ನ ಬಳಾಗ ಬಳಗಕ್ಕೊಂದೋಲೆ ಬರೆದಾನು ॥ ಕದುರೆಯ ಮೇಲೇರಿ ಮುಂದೆ ನೋಡಿದಾನು ಮದುವಣ್ಣ । ಮುಂದೆ ಸಾಲದೆಂದು ಮೊಗಬಾಡಿ ಮುಂದೆ ಸಾಲದೆಂದು ಮೊಗಬಾಡಿ ಮದುವಣ್ಣ ಸಾಸುವೆ ಕಾಳಂತೆ ಊರೆಲ್ಲ ಅಕ್ಕ ತಂಗಿಯರು ಊರಿಗೆ ಒಂದು ಓಲೆ ಬರೆದಾನು ॥ ಹಿಂದೆ ಸಾವಿರ ಮುಂದೆ ಸಾವಿರ ಎರಡು ಸಾರಿ ಜನರೆಲ್ಲಾ। ಎರಡು ಸಾವಿರ ಜನವೆಲ್ಲ ದಿಬ್ಬಣವನೆ ಹೊರಟಾರು ॥ ಮಾವನರಮನೆಯಲ್ಲಿ ಅತ್ತಿಗೆ ನಾದಿನಿಯರು ಬಲು ಹೆಚ್ಚು । ವೀಳ್ಯದಲ್ಲಿ ಕಪಟ ತಂದಿರುಸ್ಯಾರು ಮಗನೇ ಬಠಲು ಜೋಕೆಯಲ್ಲಿ ಕನ್ಯೆಯ ಕರಕೊಂಡು ಅರಮನೆಗೆ ಬರಬೇಕು ॥

**7. ಅಳಿಯನ ನೋಡುವ ಹಾಡು:**

ಚಾಣೆ ಕಲ್ಲಿನ ಮೇಲೆ ಸರಮುತ್ತು ಸರಿಯೋನೆ ಚಂದ್ರ ಮಂಡಲ ಕೊಡೆ ಬಂತು ನಿಮ್ಮನೆಗೆ ಅತ್ತೆ ನೋಡತ್ತೆ ಅಳಿಯಾನ ಚಾಣೆ ಕಲ್ಲಿನ ಮೇಲೆ ಸರಮುತ್ತು ಸುರಿಯೋ ಸೂರ್ಯಮಂಡಲದ ಕೊಡೆ ಬಂತು ಅತ್ತೆ ಅಳಿಯನ । ಚಪ್ಪರಕ್ಕೆ

ದೀವಿಗೆ ಬೇಗ ತಂದಿರಿಸಿ ಅರ್ಕಮಂಡಲದ ಕೊಡೆ ಬಂತು ಅತ್ತೆ ನೋಡತ್ತೆ ಅಳಿಯನ। ಬಾಲಟ್ಟುವಾಗ ಘಂಟೆ ಬಾರಿಸುವಾಗ ಬಾಯಿಗೆ ಬಜಿ ಬೆಣ್ಣೆ ಕೊಡುವಾಗ ಆಗ ನೋಡಿದರೆ ಅಳಿಯನ । ಪುತ್ರನುಟ್ಟುವಾಗ ಬಟ್ಟಲು ಬಾರಿಸುವಾಗ ನಾನಾ ರಾಗಗಳು ನುಡಿಸುವಾಗ ಆಗ ನೋಡಿದೆನೆ ಅಳಿಯನ। ಯಾವಾಗಲೂ ನಮ್ಮನೆಗೆ ಪಗಡೆಯಾಡಲಿಕ್ಕೆ ಬರುತ್ತಿದ್ದ ಆಗ ನೋಡಿದೆನೆ ಅಳಿಯನ । ನಿತ್ಯವಾಗಲು ನಮ್ಮನೆಗೆ ಚೆಂಡಾಟಾಡಲಿಕ್ಕೆ ಬರುತ್ತಿದ್ದ ಆಗ ನೋಡಿದೆನೆ ಅಳಿಯನ। ಅದೊಂದು ಹೆಜ್ಜೇನು ಇದೊಂದು ಕುಂದೇನು ಇದೊಂದು ದೋತ್ರ ಹೇಗಲಲ್ಲಿ. ಇದೊಂದು ದೋತ್ರ ಹೆಗಲಲ್ಲಿಟ್ಟಿದ್ದೀರಿ ಧಾರೆರೆದು ನೋಡಿ ಅಳಿಯನ। ಮಾಳಿಗೆ ಮನೆ ಕಂಡು, ಜೋಳಿಗೆ ಹೊನ್ನಕಂಡು ಅಳಿಯರಾಯರ ಗುಣಕಂಡು ಮೇಲಾದ ಮಗಳ ಕೊಡಬೇಕು ॥

**8) ಅ) ಬಣ್ಣ ಬಂಗಾರ ಬಳಸುವಾಗ ವರನ ಕಡೆಯಿಂದ ಹೇಳುವ ಹಾಡು :**

ಮುತ್ತಿನ ಚೆಂಡು ಮೂವತ್ತು ನವಲಕ್ಕಿ ಹೋಗಿ ಮಾತಾಡುವ ಒಲಿ ಮಾಲೆ। ಹೋಗಿ ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೋದಿಸುವ ರೂಪಾ... ಗಳಾ ॥ ಹವಳದಾ ಚೆಂಡು ಹದಿನಾರು ನವಲಕ್ಕಿ ಕರೆದು ಮಾತಾಡುವ ಒಲಿಮಾಲೆ । ಕರೆದು ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೋದಿಸುವ ರೂಪಾ... ಗಳಾ । ಚಿನ್ನದ ಚೆಂಡು ಹನ್ನೆರಡು ನವಲಕ್ಕಿ ನಿಂತು ಮಾತಾಡುವ ಒಲಿಮಾಲೆ । ನಿಂತು ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೋದಿಸುವ ರೂಪಾ... ಗಳಾ॥

ಹೋದ ಹೋದಲೆಲ್ಲಾ ಬಾಲಯ್ಯಗೆ ಗುಡಿ ಹೋಯಿಸಿ ಬಾಲಯ್ಯಗೆ ಹಾಲಕೊಡೂ... ವಳು ಬಾಲಯ್ಯಗೆ ಹಾಲ ಕೊಡವಳು ಶೋಬಾನದವಳು ಸಾಗಿ ಶೋಭಾನಕ್ಕೆ ಬರಾ... ಹೇಳಿ । ನಿಂತ ನಿಂತಲೆಲ್ಲಾ ಕಂದಯ್ಯಗೆ ಗುಡಿಹೊಯಿಸಿ, ಕಂದಯ್ಯಗೆ ಹಾಲು ಕೊಡುವಳು।

ಹಾಲು ಕೊಡುವಳು ಶೋಬಾನದವಳು ಸಾಗಿ ಶೋಬಾನಕ್ಕೆ ಬಾರ..., ಹೇಳಿ ॥ ಕೂತ ಕೂತರೆಲ್ಲಾ ಪುತ್ರಯ್ಯಗೆ ಗುಡಿಹೋಯಿಸಿ ಪುತ್ರಯ್ಯಗೆ ಹಾಲು ಕೊಡೋ...ವಳು। ಪುತ್ರಯ್ಯಗೆ ಹಾಲು ಕೊಡುವಳು ಶೋಭಾನದವಳು ಸಾಗೀ ಶೋಭಾನಕ್ಕೆ ಬರಾ... ಹೇಳಿ ।

ಆ ಊರು ಮಳೆ ಬಂದು ಈ ಊರು ತಂಬಿಗುತ್ತಿ ಸಾಗರದ ಹೊಸ ಮಳೆ। ಗುತ್ತಿ ಸಾಗರದ ಹೊಸ ಮಳೆ ಬಂದು ಮಾವನವರೆ ನಮಗೊಂದು ದೋಣಿ ಕಳೂ... ಗಿರಿ ॥

ನಮಗಿಲ್ಲದ ದೋಣಿ ನಾವೆಲ್ಲಿಂದ ಕಳುಗಾಲಿ ನಿಲ್ಲಲೀ ಜನರು ಹೊಳೆತಾವಾ...।

ಆ ಊರು ಮಳೆ ಬಂದು ಈ ಊರು ಕೆರೆ ತುಂಬಿ, ಗೋವೆ ಸಾಗರದ

ಹೊಸ ಮಳೆ। ಗೋವೆ ಸಾಗರದ ಹೊಸ ಮಳೆ ಬಂದು ಮಾವನವರೇ ನಮಗೊಂದು ಚಿಮಣಿ ಕಳೂ... ಗಿರಿ ॥

ನಮಗಿಲ್ಲದ ಚಿಮಣಿ ನಾವೆಲ್ಲಿಂದ ಕಳುಗಾಲಿ ಮೆಲ್ಲಗೆ ಸಾಗಿ ಬರಾಹೇಳಿ...! ಎಂದಾಗದವರ ಮಾವ ಮುದ್ರಾದುಂಗುರವ ಕಳೂಗ್ಯಾರು ॥

ಗದ್ದೆ ಏರಿಯ ಮೇಲೆ ಇರುವೆ ಸಾಲಿಟ್ಟಂತೆ ದಿಬ್ಬಣ ನಿಮ್ಮನಗೆ ಬರುತ್ತೇವೆ। ದಿಬ್ಬಣ ನಿಮ್ಮನೆಗೆ ಬರುತ್ತೇವೆ ಮಾವನವರೇ ನಿಮಗೊಂದು ಹೊತ್ತೆ ಕಳೂ... ಗಿರಿ ॥ ನಮಗಿಲ್ಲದ ಹೊತ್ತೆ ಸಾವೆಲ್ಲಿಂದ ಕಳುಗಾಲಿ ಕನ್ನೆವರ ಓಲೆ ಬೆಳಕಲ್ಲಿ ಬರಾ... ಹೇಳಿ ॥

ಗದ್ದೆ ಏರಿಯ ಮೇಲೆ ಗುಬ್ಬಚ್ಚಿ ಸಾಲಿಟ್ಟಂತೆ ದಿಬ್ಬಣ ನಿಮ್ಮನೆಗೆ ಬರುತ್ತೇವೆ. ದಿಬ್ಬಣ್ಣ ನಿಮ್ಮನೆಗೆ ಬರುತ್ತೇವೆ. ಮಾವನವರೇ ನಮಗೊಂದು ಹೊತ್ತ ಕಳೂ... ಗಿರಿ ॥

ನಮಗಿಲ್ಲದೆ ಹೊತ್ತೆ ನಾವೆಲ್ಲಿಂದ ಕಳುಗಾಲಿ। ನೇತ್ರೆವರ ಕೊಪ್ಪಿನ ಬೆಳಕಲಿ ಬರಾ... ಹೇಳಿ ॥

ದೂರದ ದಿಬ್ಬಣ ಧೂಳೆದ್ದು ನಾವು ಬಂದು ಗುಡ್ಡೆಯ ನವಿಲೆಲ್ಲಾ ಬೆದರಿ ಬೆಟ್ಟವ ಸೇರಿ ಒಪ್ಪತ್ತಿನ ಊಟ ತಡವಾದೊ ಹತ್ತಿರದ ದಿಬ್ಬಣ ಹತ್ತಿಳಿದು ನಾವು ಬಂದು ಹಟ್ಟಿಯ ದನವೆಲ್ಲಾ ಬೆದರಿಯಾವು । ಹಟ್ಟಿಯ ದನವೆಲ್ಲ ಬೆದರಿ ಬೆಟ್ಟವ ಸೇರಿ ಒಂದೊತ್ತಿನ ಮೇವು ತಡವಾದೊ॥

ಹತ್ತನಾರದ ಗಟ್ಟವ ಹತ್ತಿತು ನಮ್ಮ ದಿಬ್ಬಣ, ಹತ್ತು ಕೊಪ್ಪರಿಗೆ ಬಿಸಿ ನೀರು । ಹತ್ತು ಕೊಪ್ಪರಿಗೆ ಬಿಸಿ ನೀರು ಬಾಳೆಯ ಹಣ್ಣು ಬಚ್ಚಲು ಮನೆಲಿಡ ಹೇಳಿ॥ ಇಳಿಯನಾರದ ಗಟ್ಟವ ಇಳಿದೀತು ನಮ್ಮ ದಿಬ್ಬಣ ಏಳು ಕೊಪ್ಪರಿಗೆ ಬಿಸಿ ನೀರು । ನಿಂಬೆಯ ಹಣ್ಣು ಬಚ್ಚಲ ಮನೇಲಿಡಹೇಳಿ ॥

ಹಾರವರ ಮನೆ ಮುಂದೆ ಹಟ್ಟಿ, ಕೆಸರು, ಪಟ್ಟಿ ಕೆಸರು ನೇವಳ ಜಾರಿದರೆ ಮಳಾಲಿಗೆ।

ನೇವಳ ಜಾರಿದರೆ ಮಳಾಲಿಗೆ ಮಾವನವರೇ ರುವಾರದ ಬಾಣ ಬಿಡುತ್ತಾನೆ। ರುವಾರದ ಬಾಣ ಬಿಡುತ್ತಾನೆ ಆಚೆಲೊಬ್ಬ ಮುತ್ತಿನ ಚೆಂಡಿಡಿದು ಬಲೂ ಜತನ ॥

ಶೆಟ್ಟಿಯವರ ಮನೆ ಮುಂದೆ ಹಟ್ಟಿ ಕೆಸರು, ಪಟ್ಟಿ ಕೆಸರು ಸರಪಣಿ ಜಾರಿದರೆ ಮಳಾಲಿಗೆ । ಸರಪಣಿ ಜಾರಿದರೆ ಮಳಲಿಗೆ ಮಾವನರೆ ರುವಾರದ ಬಾಣ ಬಿಡುತ್ತಾನೆ.

ರುವಾರದ ಬಾಣ ಬಿಡುತ್ತಾನೆ ಅಚೆಲೊಬ್ಬ ಚಿನ್ನ ಚೆಂಡಿಡಿದು ಬಲೂ ಜತನ ॥

ಮುತ್ತಿನಂತಹ ಬಯಲಲ್ಲಿ, ಮುತ್ತಿನಂತಹ ದೊರೆರಾಯ, ಮುತ್ತು ಚೆಲ್ಲಾಡಿ ಬರೂತ್ತಾನೆ ಮುತ್ತು ಚೆಲ್ಲಾಡಿ ಬರುತ್ತಾನೆ ಮಾವನವರೇ ಮುತ್ತು ಬೇಕೋ ಚಪ್ಪರಕ್ಕೆ, ಮುತ್ತು ಬೇಕೋ ಚಾವಡಿಗೆ, ಮುತ್ತು ಬೇಕೋ ಮಾವನ ಮಗಾಳಿಗೆ ॥

ಚಿನ್ನದಂತಹ ಬಯಲಲ್ಲಿ ಚಿನ್ನದಂತಹ ದೊರೆರಾಯ ಚಿನ್ನ ಚೆಲ್ಲಾಡಿ ಬರೂತ್ತಾನೆ॥ ಚಿನ್ನಚೆಲ್ಲಾಡಿ ಬರುತ್ತಾನೆ. ಮಾವನವರೇ ಚಿನ್ನ ಬೇಕೋ ಚಪ್ಪರಕ್ಕೆ ಚಿನ್ನ ಬೇಕೋ ಚಾವಡಿಗೆ ಚಿನ್ನ ಬೇಕೋ ಮಾವನ ಮಗಾಳಿಗೆ ॥

ಹವಳದಂತ ಬಯಲಲ್ಲಿ ಹವಳದಂತ ದೊರೆರಾಯ, ಹವಳ ಚೆಲ್ಲಾಡಿ ಬರೂತ್ತಾನೆ । ಹವಳ ಚೆಲ್ಲಾಡಿ ಬರುತ್ತಾನೆ ಮಾವನವರೇ ಹವಳ ಬೇಕೋ ಚಪ್ಪರಕ್ಕೆ ಹವಳ ಬೇಕು ಚಾವಡಿಗೆ ಹವಳ ಬೇಕೋ ಮಾವನ ಮಗಾಳಿಗೆ।

ಮುತ್ತಿನಂತಹ ಚಪ್ಪರದಡಿಯಲ್ಲಿ ಮುತ್ತಿನಂತಹ ಮಗಳ ಇರಿಸಿ, ನಂದಾದೀವಿಗೆ ಎದೂರಿಗೆ । ಬಾಳೆಯ ಹಣ್ಣ ನೋಡಿ ಬಾಲೆವರು ಬರೋದು ನೋಡಿ ಬಾಗಂಚಿನ ಸೇಲೆ ಸೆರಗಾ ನೋಡಿ। ಬಾಗಂಚಿನ ಸೇಲೆ ಸೆರಗಾವ ನೋಡಿ, ಬಾಲೆವರು ಬರದೊಂದು ಬೆಡಗಾ ನೋಡಿ ॥ ನಿಂಬೆಯ ಹಣ್ಣ ನೋಡಿ ರಂಬೆವರು ಬರುವುದು । ನೋಡಿ ರಂಗಂಚಿನ ಸೇಲೆ ಸೆರಗಾ ನೋಡಿ ರಂಗಂಚಿನ ಸೇಲೆ ಸೆರಗಾವ ನೋಡಿ, ರಂಬೆವರು ಬರುವುದೊಂದು ಬೆಡಗಾ ನೋಡಿ ॥ ಕಿತ್ತಳೆ ಹಣ್ಣ ನೋಡಿ, ಚಿಕ್ಕವರು ಬರುವುದ ನೋಡಿ, ಚಿಕ್ಕಂಚಿನ ಸೇಲೆ ಸೆರಗಾ ನೋಡಿ, ಚಿಕ್ಕಂಚಿನ ಸೇಲೆ ಸೆರಗಾವ ನೋಡಿ, ಚಿಕ್ಕವರು ಬರುವುದೊಂದು ಬೆಡಗಾ ನೋಡಿ ॥

ಹಿಂಗಡಗ ಮುಂಗಡಗ ಬೆಳ್ಳಿಯ ಎಂಟು ಕಡಗ ಆಚಿಲೆಂಬುವುದು ಅರಳೋಲೆ। ಆಚಿಲೆಂಬುವುದು ಅರಳೋಲೆ ಕಡಗ ಒಪ್ಪಾನೆ ನಿಮ್ಮ ಮನಸ್ಸಿಗೆ । ಒಪ್ಪಾವೆ ನಿಮ್ಮ ಮನಸ್ಸಿಗೆ ಮಾವನವರೇ ತೋರಿರಿ ನಿಮ್ಮ ಸಭೇಗೆಲ್ಲಾ...।

ಓಲೆಗೆ ಚಿನ್ನ ಕೊಂಡು ವೈನಾಡ ತಿರುಗಿದೆ ವೈನಾಡ ಅಗಸಾಲೆ ಮನೆಲಿಲ್ಲ ವೈನಾಡಗಸಾಲೆ ಮನೆಲಿಲ್ಲ ಮಂಟಪದಲಿಲ್ಲ ಓಲೆ ತಿದ್ದುವಾಗ ಬೆಳಗಾದೋ ॥ ಕೊಪ್ಪಿಗೆ ಚಿನ್ನ ಕೊಂಡು ಒಪ್ಪೂರ ತಿರುಗಿದೆ. ಒಪ್ಪೂರ ಅಗಸಾಲೆ ಮನೆಲಿಲ್ಲ । ಒಪ್ಪೂರ ಅಗಸಾರೆ ಮನೆಲಿಲ್ಲ ಮಂಟಪದಲಿಲ್ಲ ಕೊಪ್ಪುಕೊಳ್ಳುವಾಗ ಬೆಳಗಾದೋ॥

ಸ್ಯಾಲೆ ತಂದಿದೇವ ಹನ್ನೆರಡು ವರಹದ ಪಟ್ಟೆ, ಓಪ್ಪಾವೆ ಮಾವ ನಿಮ್ಮ ಮನಸ್ಸಿಗೆ ಓಪ್ಪಾವೆ ನಿಮ್ಮ ಮನಸ್ಸಿಗೆ ಮಾವನವರೆ ತೋರಿರಿ ನಿಮ್ಮ ಸಭೇಗೆಲ್ಲ ರವಕೆ ತಂದಿದ್ದೇವೆ. ಬಟ್ಟು ಕುಚ್ಚದ ಪಟ್ಟೆ ಆದವೋ ನಿಮ್ಮ ಮಗಳಿಗೆ। ಆದವೋ ನಿಮ್ಮ ಮಗಳಿಗೆ ಮಾವನವರೇ ತೋರಿರಿ ನಿಮ್ಮ ಸಭೇಗೆಲ್ಲ. ॥

ಚಿನ್ನದ ಹೊರಗೋಡೆ ಚಿನ್ನದ ಒಳಗೋಡೆ, ಚಿನ್ನದ ಹನಿಸಿದ ಅರಾಮನೆ। ಚಿನ್ನ ಹನಿಸಿದ ಅರಮನೆಯ ಒಳಗಿರುವ ಕನ್ಯೆಯನೀಚೆಗೆ ಕರೆ ತನ್ನಿ। ಮುತ್ತಿನ ಹೊರ ಗೋಡೆ ಮುತ್ತಿನ ಒಳಗೋಡೆ ಮುತ್ತು ಹನಿಸಿದ ಅರಮನೆ ಮುತ್ತು ಹನಿಸಿದ ಅರಮನೆ ಒಳಗಿರುವ ಕನ್ಯೆಯನೀಚೆಗೆ ಕರೆ ತನ್ನಿ॥

ಪಟ್ಟೆ ಸೇಲೆಯೊಳಗೆ ಮುಚ್ಚಿಟ್ಟ ಮಗಳು ಸಿಕ್ಕಿತು ಶಿವನ ದಯೆಯಿಂದ । ಸಿಕ್ಕೀತು ಶಿವನ ದಯೆಯಿಂದ ಮಾವನವರೇ ಬಾಳೆ ಸುಳಿಯಂತೆ ಸುಳೂಕುತ್ತಾ। ಸ್ಯಾಲೆ ಹಚ್ಚಡದೊಳಗೆ ಮುಚ್ಚಿಟ್ಟ ಮಗಳು ಸಿಕ್ಕಿತು ಶಿವನ ದಯೆಯಿಂದ । ಸಿಕ್ಕೀತು ಶಿವನ ದಯೆಯಿಂದ ಘಂಠಿ ಸುಳಿಯಂತೆ ಸುಳೂಕೂತ್ತಾ...॥

ಆ) ಬಣ್ಣ ಬಂಗಾರ ಬಳಸುವಾಗ ವಧುವಿನ ಕಡೆಯಿಂದ ಹೇಳುವ ಹಾಡು :

ವಜ್ರದಂಟಿಗೆ ಗೆಜ್ಜೆಸರ ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ

ಸಾಲ ಮಾಡಿ ತರಬೇಡಿರಿ ನಮಗಾಗಿ ಹೆಚ್ಚಿಗೇನು ಬೇಡುವುದಿಲ್ಲ ನಿಮಗಾಗಿ॥

ಮೂಗಿಸ್ಮೇಲೆ, ಮೂಗಿಸ್ಮೇಲೆ, ಮೂಗಲ್ಲಿರುವ ಮುತ್ತಿನ ಬೊಟ್ಟು ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ॥

ಕಿವಿಯ ಮೇಲೆ, ಕಿವಿಯಾ ಮೇಲೆ, ಕಿವಿಯಾ ಓಲೆ ಹೊಳೆವುದು ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ॥

ಸಾಲ ಮಾಡಿ ತರಬೇಡಿ ನಮಗಾಗಿ ಹೆಚ್ಚಿಗೇನು ಬೇಡುವುದಿಲ್ಲ ನಿಮಗಾಗಿ ಕೊರಳಾ ಮೇಲೆ, ಕೊರಳಾ ಮೇಲೆ ಕೊರಳಾ ಪದಕ ಥಳಾ ಥಳಾ

ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ॥ ವಜ್ರ ॥

ನಡುವಿನ್ ಪಟ್ಟಿ, ನಡವಿನ ಪಟ್ಟಿ, ನಡುವಿನ್ ಪಟ್ಟಿ ಗೆಜ್ಜೆ ಡಾಬೂ ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ॥

ಕೈಯ್ಯಾ ಮೇಲೆ, ಕೈಯ್ಯಾ ಮೇಲೆ, ಕೈಯ್ಯಾ ಬಳೆ ಹೊಳೆವುದು ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ॥

ಕಾಲ ಮೇಲೆ, ಕಾಲ ಬೆರಳಾ ಮೇಲೆ ಬೆರಳಿನುಂಗುರ ಹೊಳೆವುದು ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ॥ ಸಾಲ ಮಾಡಿ ॥

ಮೈಯ್ಯ ಮೇಲೆ, ಮೈಯ್ಯ ಮೇಲೆ, ಮೈಯ್ಯಲ್ಲಿರುವ ಜರೀ ಸೀರೆ ಥಳಾ ಥಳಾ, ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ॥ ಸಾಲ ಮಾಡಿ ॥

**9) ಅ) ಹೆಣ್ಣು ಹುಡುಕುವ ಶೋಬಾನೆ :**

ಬಾಳೆಹನಿ ಬಿದ್ದು ಬಾಲೆವರು ಸತಿಗದ್ದು ಬಾಲೆವರು ನಾವು ಗೆದ್ದ ಗಳೀಗೆಲ್ಲ। ಬಾಲೆಯವರು ನಾವು ಗೆದ್ದ ಗಳಿಗೇಲಿ ಮಾವನವರೇ ನಾವು ಹೋಗಿ ಬರುತ್ತೇವೆ ಮನೆ ದೂರ ॥ ನಿಂಬೆ ಹನಿ ಬಿದ್ದು ರಂಬೆಯರ ಬಳಿಗೆದ್ದು ರಂಬೆಯುವರು ನಾವು ಗೆದ್ದ ಗಳೀಗೇಲಿ। ರಂಬೆವರು ನಾವು ಗೆದ್ದ ಗಳಿಗೇಲಿ ಅತ್ತೆಮ್ಮನವರೇ ನಾವು ಹೋಗಿ

ಬರುತ್ತೇವೆ ಮನೆ ದೂರ ॥ ಸೇರಲಿರುವ ಮುತ್ತು ಸೇರಲಿಕ್ಕೆ ಅತಿ ಕಷ್ಟ ಸೇರಿತೋ ಶಿವನ ದಯದಿಂದ। ಸೇರಿತೋ ಶಿವನ ದಯದಿಂದ ಮಾವನವರೆ ನಾವು ಹೋಗಿ ಬರುತ್ತೇವೆ ಮನೆ ದೂರ ॥ ಮಾವನಲ್ಲಿರುವ ಮುತ್ತು ಸಿಕ್ಕಲಿಕ್ಕೆ ಅತಿ ಕಷ್ಟ ಸಿಕ್ಕತ್ತೋ ಶಿವನ ದಯದಿಂದ । ಸಿಕ್ಕತ್ತೋ ಶಿವನ ದಯದಿಂದ ಅತ್ತೆಮ್ಮನವರೇ ನಾವು ಹೋಗಿ ಬರುತ್ತೇವೆ. ಮನೆ ದೂರ ॥ ಪಟ್ಟೆ ಪಟ್ಟಪದೊಳಗೆ ಮುಚ್ಚಿ ಮಡುಗಿದ ಮಗಳು ಸಿಕ್ಕತ್ತೋ ಶಿವನ ದಯದಿಂದ । ಸಿಕ್ಕಿತ್ತೋ ಶಿವನ ದಯದಿಂದ ಮಾವನವರೇ ಹೋಗಿ ಬರುತ್ತೇವೆ ಮನೆ ದೂರ ॥ ಶ್ಯಾಲೆ ಪಟ್ಟಪದೊಳಗೆ ಮುಚ್ಚಿ ಮಡುಗಿದ ಮಗಳು ಸಿಕ್ಕಿತ್ತೋ ಶಿವನ ದಯದಿಂದ । ಸಿಕ್ಕಿತ್ತೋ ಶಿವನ ದಯದಿಂದ ಅತ್ತೆಮ್ಮನವರೇ ಹೋಗಿ ಬರುತ್ತೇವೆ ಮನೆ ದೂರ ॥ ಕಡಲೆ ಹೊಲದಲ್ಲಿ ನಿಂತುಂಟು ನಮ್ಮ ದಿಬ್ಬಣ ನಾವು ಹೋಗಿ ಬರುವ ತನಕ ಬಲು ಜೋಕೆ ॥ ಉದ್ದಿನ ಹೊಲದಲ್ಲಿ ನಿಂತುಂಟು ನಮ್ಮ ದಿಬ್ಬಣ ನಾವು ಹೋಗಿ ಬರುವ ತನಕ ಬಲು ಜೋಕೆ ॥

**ಆ) ಹೆಣ್ಣು ಹಿಡಿಯುವ ಶೋಬಾನೆ :**

ಮುತ್ತಿನ ಸೆರಗಡಲ ಮುಚ್ಚಿಟ್ಟ ಮಾವನ ಮಗಳು ಸಿಕ್ಕಿತ್ತೋ ನಮಗೆ ಶಿವನ ದಯೆಯಿಂದ ಸಿಕ್ಕಿತ್ತೋ ಶಿವನ ದಯದಿಂದ ಮಾವನ ಮಗಳು ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ॥ ಹವಳದ ಸೆರಗಡಲಿ ಮುಚ್ಚಿಟ್ಟ ಎಳೆ ಮುದ್ದು । ಸಿಕ್ಕಿತ್ತೋ ಶಿವನ ದಯದಿಂದ॥ ಸಿಕ್ಕಿತ್ತೋ ಶಿವನ ದಯದಿಂದ ಅತ್ತೆಯ ಮಗಳೇ ನಾವು ನೆನೆದ ಕಾರ್ಯ ನೆರವಾದೋ ॥ ಅತ್ತೆಯ ಮಗಳ ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ॥ ಚಿನ್ನದ ಸೆರಗಡಲಿ ಮುಚ್ಚಿಟ್ಟ ಮಾಣಿಕ್ಯ ಸಿಕ್ಕಿತ್ತೋ ಶಿವನ ದಯದಿಂದ ಸಿಕ್ಕಿತ್ತೋ । ಭಾವನ ತಂಗಿ ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ॥ ಪಾರ್ವತಿ ಸೀತಾದೇವಿಗಳ ವಸ್ತ್ರದಡಿಯಲ್ಲಿ ಮುಚ್ಚಿಟ್ಟ ಎಲೆ ಶಿಶುವು ಸಿಕ್ಕಿತ್ತೋ॥ ಶಿವನ ದಯದಿಂದ ಸಿಕ್ಕಿತ್ತೋ ॥ ನಾದಿನಿ ಮೈದುನರ ಅಕ್ಕಂಗೆ ನಾವು ನೆನೆದ ಕಾರ್ಯ ನೆರವಾದೋ ಶಿವನ ದಯದಿಂದ ನೆರವಾದೋ ನಾದಿನಿ ಮೈದುನರ ಅಕ್ಕನ ರಾಜ್ಯಕ್ಕೆ ನಮ್ಮಣ್ಣ ದೊರೆರಾಯ॥

## 10. ವಧುವಿನ ಶೃಂಗಾರ ಸಮಯದಲ್ಲಿ

**ಅ) ತಲೆ ಬಾಚುವಾಗ ಹೇಳುವ ಹಾಡು :**

ಬ್ರಹ್ಮನ ರಾಣಿಯು ನಿಮ್ಮ ಶ್ರೀ ಚೆನ್ನ ಚರಣಕ್ಕೆರಗುವೆನು । ಹಣ್ಣು ತೆಂಗಿನ ಕಾಯಿ ಚಕ್ಕುಲಿಯ ಚೆನ್ನ ಗಣಪತಿಗೆ ನೈವೇದ್ಯಕ್ಕೆ ಇಟ್ಟು। ನಿಸ್ತಲಮ್ಮಾಯಿಗೆ ತರುಬಿಕ್ಕುವ। ಪದವನೆ ಮಂಡಿಸುವೆ ನಾನು ಮುದದಿಂದ । ಹನ್ನೆರಡು ಜನಗಳ ಮುತ್ತಿನ ಚಪ್ಪರ ಚಿನ್ನದ ಕಂಬವು ಮುತ್ತು ರತ್ನದ ನವರತ್ನ ಬೀದಿಗೆಯ। ಚಿನ್ನ ಮಾಣಿಕದ । ತಲೆ

ಜಂತೆಗಳ ತಂದಿರಿಸಿ ನಿಸ್ತಲಮ್ಮಾಯಿಗೆ ಕುಳ್ಳಿರುವ ಜನರಿಗೆ ವಿಸ್ತಾರದ ನೋಡಿ ಜನರೆಲ್ಲಾ । ಹತ್ತೆಂಟು ಜನಗಳಿಗೆ ಮುತ್ತಿನ ಕಂಬವು ಚಿನ್ನದ ಚಪ್ಪರ । ಚಿನ್ನ ಮಾಣಿಕದ ತಲೆ ಜಂತೆಗಳ ತಂದಿರಿಸಿ । ಕನ್ನಮ್ಮಾಯಿಗೆ ಕುಳ್ಳಿರುವ ಜಗಲಿಯ ವಿಸ್ತಾರದ ನೋಡಿ ಜನರೆಲ್ಲ । ಮುತ್ತಿನ ಚಪ್ಪರದೊಳಗೆ ಸುತ್ತೇಳು ದೀವಿಗೆ ಬೆಳಗಿರಲು । ಓರಣದಿಂದಲಿ ಬಂದು ಹಸೆಗಳ ಬರೆದು । ಕರುಣೆ ಕಲಸಿದ ಹಸೆ ಮಣೆಗಳ ತಂದಿರಿಸಿ । ಹಸಿರು ಪಟ್ಟೆಗಳ ಉಪಚರಿಸಿ ಹಾಸಿ । ಹಸಿರು ಮುತ್ತೈದೆಯರು ಕುಳ್ಳಿರಲು ಚಿನ್ನದುಪ್ಪರಿಕೆಯೊಳಗೆ ಸುತ್ತೇಳು ದೀವಿಗೆ ಬೆಳಗಿರಲು । ಓರಣದಿಂದ ಬಂದು ಹಸೆಗಳ ಬರೆದು ಕರುಣೆ ಕಲಸಿದ ಹಸೆ ಮಣೆಗಳ ತಂದಿರಿಸಿ ಜೋಡು ಪಟ್ಟೆಗಳ ಉಪಚರಿಸಿ ಹಾಸಿ । ಹಸಿರು ಮುತ್ತೈದೆಯವರು ಕುಳ್ಳಿರಲು । ಬರಹೇಳಿ ಹೊರಕ್ಕೆ ಒಳಗಿರುವವರ ನಾರಿ ಸತಿ ಚೆಲುವೆ ಚೆಲುವಿಕೆಯರು ತುರುಬ ನಿಕ್ಕುವರ ಬರಾ ಹೇಳಿ॥

**ಆ) ಹೂ ಮುಡಿಸುವಾಗ ಹೇಳುವ ಹಾಡು :**

ಕೊಡು ತಾಯೆ ಕುಸುಮವನು ತಾರದ ತಾಯೆ । ಕೊಡುತಾಯೆ ಕುಸುಮವನು॥ ಪರಕೀನದವನಾದ ಮರುಗ ಮಲ್ಲಿಗೆ ಜಾಜಿ । ಸುರಗೆ ಸಂಪಿಗೆ ಸೆರವ ಕೊಡು ತಾಯೆ ಕುಸುಮವನು॥ ಸಂತತ ಧನವಾದ ದಂತಿನವಾಸಿನಿ ಸಂತರ ರೂಪಿನೊಳಿರುವ ಸಂಪಿಗೆ ಹೂವಿನ ಸರವ। ಕೊಡು ತಾಯೆ ಕುಸುಮವನು ಶಾರದ ತಾಯೆ ಕೊಡು ತಾಯೆ ಕುಸುಮವನು ॥ ಎಲ್ಲರ ಮನಸ್ಸಿಗೆ ಉಲ್ಲಾಸ ತೋರುವ । ಬಲ್ಲವರು ಮೆಚ್ಚಿದ ಮಲ್ಲಿಗೆ ಹೂವಿನ ಸರವ ಕೊಡು ತಾಯೆ ಕುಸುಮವನು ॥ ಅರಳಿದ ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳನು । ಸುರರು ತಂದಿರುವರು । ವನಿತೆ ಜಾನಕಿಗೆ । ಕೊಡು ತಯೆ ಕುಸುಮವನು॥

**ಇ) ವಧುವನ್ನು ಶೃಂಗರಿಸುವಾಗ ಹೇಳುವ ಹಾಡು :**

ಪಂಕಜಾಕ್ಷನ ಸತಿಗೆ ಕುಂಕುಮಾಕ್ಷತೆ ತಳಿದು ವಂಕಿ ಬಳೆಯನ್ನಿಟ್ಟು । ನಾರಿಯರೆಲ್ಲ ತಂಕ ಮಾಡದೆ ತಾ ಉಟ್ಟು । ಪರಿಪರಿಯ ತರಿಕೆಯಿಂದಲಿ ಬರಬಿಟ್ಟು । ಕಂಕಣವನಿಟ್ಟು ಶಂಕಿಸದೆ ಬಲು ಹರುಷದಿಂದಲಿ ಶಂಕರಾಧ್ಯರ ಸತಿಯರ ಸಹಿತಲಿ ಕಿಂಕರಾದಿ ಜನರು ಮತಿಸುತ । ಶಂಕೆ ಇಲ್ಲದೆ ಬಗೆ ಬಗೆಯ ಸುಮ ಬಿಂಕದಿಂದಲಿ ಮಂಡಿಸಿದರು ॥ ಶೋಬಾನೆ ॥ ಚಾರುರಮಣೀಯರ ವಿಚಾರಿಸಿ ಮನದೊಳು । ಸಾರವಾಗಿಹುದು ನೋಡಿ ದೋಷಗಳೆಲ್ಲ ಪಾರುವಾಗುವುದೆಂದಾಡಿ । ಗರ್ಭಿಣಿಯರು ಸೇರಿ ಶಂಕನೆಂದೋಡಿ ಪರಿಚಯವ ಮಾಡಿ ಮೂರು ಲೋಕದೊಳ್ ಮೆರೆವ ಕುಸುಮದೊಳ್। ಬಾರಿ ಖ್ಯಾತಿಯನು ಪಡೆದು ಸುಲಭದೊಳಾಗಿರಿಗೂ ದೊರೆಯಲಸಾಧ್ಯದ । ವಾರಿಜಾಕ್ಷನ ರಾಣಿಗೆ ಸುರ ಪಾರಿಜಾತದ್ಹೊವ ಮುಡಿಸಿದರು॥ ಶೋಬಾನೆ॥ ಗರುಡಗಮನ ರಾಣಿ ಪನ್ನಗವೇಣಿ ಕಿರುವಿಲ್ಲ ದೊರೆಗಳು ಇಟ್ಟರು ಮತ್ತೆ । ವರ ಸ್ವರ್ಣಾಭರಣಗಳು । ಉಟ್ಟರು ಪರಿಪರಿಯ

ಸೀರೆಗಳು ಮಣಿಮಯದ ಸರಗಳು । ವಾರೆ ತೋಟದ ವಾರಿಜಾನನೆಯರು ಸೇರಿದ ಭಾರಿ ಸಭೆಯೊಳು। ಸಾರಸಾಕ್ಷಿಯು ಸೇರಿ ಬರುತ ಗಂಭೀರಗಾನದೊಳ್ ಏರಿ ರಭಸದಿ ಮರುಗ ಮಲ್ಲಿಗೆ ಮುಡಿಸಿದರು.. ॥ಶೋಬಾನೆ॥ ಹಸ್ತ ಕಡಗವಿಟ್ಟು ಚಿತ್ತಜಮಾತೆಗೆ ಭೃತ್ಯ ನಾರಿಯರು ಕೂಡಿ ಆನಂದದೊಳುತ್ತಮ ಸಭೆಯ ಮಾಡಿ ತೋಷದೊಳೈದು। ಮುತ್ತೈದೆಯರು ಕೈಗೂಡಿ । ಮಂಟಪದಿ ಪಾಡಿ ಅಸ್ತಮಯ ಕಾಲದೊಳರಳುವ ಚಿತ್ತಕ್ಕೆ ಆನದಂವೀಯುವ ಪೃಷ್ಟಿಯೊಳು ಬಲು ಉತ್ತಮವೆನ್ನುವ ಮತ್ತ ಕಾಶಿನಿ ಸತ್ಯಭಾಮೆಗೆ ಕಸ್ತೂರಿ ಮಲ್ಲಿಗೆ ಮುಡಿಸಿದರು ॥ಶೋಬಾನೆ॥

**ಈ) ವಧುವಿಗೆ ಸೀರೆ ಉಡಿಸುವಾಗ ಹೇಳುವ ಹಾಡು :**

ಚಿತ್ರದಿ ಗಣಪನ ಪುತ್ತಳೀಮರಣದ ಸೀರಿ ಉತ್ತಮ ಕರುಣೆಕರ ಮಡದಿ ಮಹಾಲಕ್ಷ್ಮಿ ಉಡುಬಾರೆ।

ಗೋಡೆ ಜೇಡನು ನೈದ ಹಳವಿನೋರಣದ ಸೀರೆ ನಿಚ್ಚಳು, ನಿಲಕಂಬಿ ನಟು ಬೆಳೆದು । ನಿಚ್ಚಳು ನಿಜಕಂಬಿ ನಡುಬೆಳದೋರಣದ ಸೀರೆ ರಾಣಿ ನೀನೀಗ ಉಡುಬಾರೆ । ಅಂಚಿಗೆ ಅರಗಿನ ಬಣ್ಣ ಸೆರಗೀಗೆ ಸೀತೆಯ ಬಣ್ಣ ಅಂಚಿ ಗಂಚಿಗೆ ಗಿಳಿನೂರು । ಅಂಚಿ ಗಂಚಿಗೆ ಗಿಳಿನೂರು ಬಣ್ಣದ ಸೀರೆ ರಾಣಿ ನೀನೀಗ ಉಡುಬಾರೆ । ಸೆರಗೀಗೆ ಸೀತೆಯ ಬಣ್ಣ ಅಂಚಿಗೆ ಅರಗಿನ ಬಣ್ಣ ನಡುವಿನ ಬಣ್ಣ ಗುರುಗಂಜಿ । ಗುರುಗಂಜಿ ಬಣ್ಣ ಸೀರೆಯ ರಾಣಿ ನೀನೀಗ ಉಡುಬಾರೆ । ಬೊಚ್ಚಳಿಗೆ ಅಡಗುವುದು ಉಟ್ಟ ಬಣ್ಣದ ಸೀರೆ ನಾರಿಯವರು ಹೋಗಿ ಬೆಲೆ ಮಾಡಿದ ತಂದ । ನಾರಿಯವರು ಹೋಗಿ ಬೆಲೆ ಮಾಡಿ ತಂದಂತಹ ಸೀರೆ ನಾರಿ ಜಾನಕ್ಕಿ ಉಡುಬಾರೆ । ಕತ್ತಲೆಗೆ ಅಂಜವುದು ಕಾಗುಣಿಸಿ ನೆರೆಯುವುದು ಮುತ್ತಿನ ಭರಣಿಯಲ್ಲಿ ಅಡಗುವುದು । ಮುತ್ತಿನ ಭರಣಿಯಲ್ಲಿ ಅಡಗುವ ಸೀರೆಯ ಉಡುಬಾರೆ । ಪಟ್ಟೆ ಸೀರೆಯ ಮೇಲೆ ತೇಲಾಡುವ ಗೊಂಬೆಗಳು ನಲವತ್ತೊಂದು ವರಹಕ್ಕೆ ಬೆಲೆಯಾದೊ। ನಲವತ್ತೊಂದು ವರಹಕ್ಕೆ ಬೆಲೆಯಾದ ಸೀರೆಯ ರಾಣಿ ನೀನೀಗ ಉಡುಬಾರೆ । ಮುಂದಲೇ ತಂದೆವು ಮುತ್ತು ಸಾರುವ ಮುತ್ತುರಂಗ ಪತಿಯೆಂಬ ರವಿಕೆಯ । ರಂಬೆ ನೀನೀಗ ಉಡುಬಾರೆ। ಅಗಸನಿಗೆ ಹಾಕುವುದಲ್ಲ ಬಿಸಿಲಿಗೆ ತೋರುವುದಿಲ್ಲ ತಾಳಿಯ ಮೇಲೆ ನೈದ ಪಟ್ಟೆಗಳ। ತಾಳಿಯ ಮೇಲೆ ನೈದ ಪಟ್ಟೆಗಳ ನಾರೀ ಜಾನಕ್ಕಿ ಉಡುಬಾರೆ । ಅಳೆದರೆ ಅರವತ್ತು ಮೊಳ ಹಿಡಿದರೆ ಹಿಡಿತುಂಬ, ಬಿಟ್ಟರೆ ಬೀದಿಯೆಲ್ಲ ತೆರೆಪಿಲ್ಲಾದ ಸೀರೆ ತರಣಿ ತಂಗಮ್ಮಳಿಗೆ ಉಡುಸ್ಯಾರು ॥

ಉ) ಮಡಿಲಕ್ಕಿ ತುಂಬುವ ಹಾಡು :

ಕೃಷ್ಣ ರುಕ್ಮಿಣಿ ಸೀತಾ ದೇವಿಗೆ ಮಡಲ ತುಂಬಿರಿ। ಮಾವಯ್ಯ ಕಳುಹಿದ ಮಡಲಕ್ಕಿ ಮುತ್ತಿನ ಬಟ್ಟು ಭಾಗ್ಯದ ಸೊಸೆ ಮುಂದು ಸೆರಗೊಡ್ಡು । ಶೋಬಾನವ್ರೋ॥ ಅತ್ತೆಮ್ಮ ಕಳುಹಿಸಿದ ಮಡಲಕ್ಕಿ ಮುತ್ತಿನ ಬಟ್ಟು ಭಾಗ್ಯದ ಸೊಸೆ ಮುಂದು ಸೆರಗೊಡ್ಡು॥ ಶೋಬಾನವ್ರೋ ॥ ಮಡಲಲ್ಲಿ ಹಚ್ಚಿನ ಬೆಲ್ಲ ತಟ್ಟೆಯಲ್ಲಿ ತೆಂಗಿನಕಾಯಿ ॥ ಶೋಬಾನವ್ರೋ ॥ ಮಡಲಲ್ಲಿ ಎಲೆ ಅಡಿಕೆ ತಟ್ಟೆಲಿ ಬಾಳೆಹಣ್ಣು ॥ ಶೋಬಾನವ್ರೋ ॥ ಮಡಲಲ್ಲಿ ಕರಿಮಣಿ ಜಿಚ್ಚೋಲೆ ತಟ್ಟೆಯಲ್ಲಿ ಸಣ್ಣಕ್ಕಿ ಶೋಬಾನವ್ರೋ॥

11. ಧಾರೆ ಆಗುವಾಗ ಹೇಳುವ ಹಾಡು :

ತಾಯಿ ಶ್ರೀಕಮಲ ತಂದೆಯು ವಿಶ್ವೇಶ ॥ ಕಲ್ಯಾಣವೇ ಸೀತೆ ಕಲ್ಯಾಣವೇ ॥ ತಾಯಿ ಶ್ರೀಕಮಲ ಎಂಬುದ ಕೇಳೀಗ ಕನ್ಯೆಗೆ ಧಾರೆ ಒದಗೀತು॥ ಕಲ್ಯಾಣವೇ ಸೀತೆ ಕಲ್ಯಾಣವೇ॥ ಕನ್ಯೆಗೆ ಧಾರೆ ಒದಗೀತೆಂಬುದು ಕೇಳಿ ಸ್ವಾಮಿಯವರಿಗೆ ಓಲೆ ಕಳುಗಿದರು. ॥ಕಲ್ಯಾಣವೇ॥ ಓಲೆಗಳನ್ನು ಓದಿಸಿ ನೋಡ್ಯಾರು ಗೌಡವರೆ ಗೌಡವರೆಯಿತ್ತ ಕೇಳಿ ॥ಕಲ್ಯಾಣವೇ॥ ಗೌಡವರೆ ಗೌಡವರೆಯಿತ್ತ ಕೇಳಿ ಗೌಡವರೆ ಕನ್ನೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಕನ್ಯೆಯರ ಮನೆಗೆ ಹೋಗುತ್ತೇವೆ ಗೌಡವರೆ ಬಚ್ಚಲ ಮನೆಗೆ ಬೆಂಕಿಯ ಹಾಕಿ ॥ಕಲ್ಯಾಣವೆ॥ ಕಾಮನ ಗುಡ್ಡಕ್ಕೆ ಬೆಂಕ್ಯಾದರು ಹಾಕ್ಯೇವು ಭೀಮನ ಗುಡ್ಡಕ್ಕೆ ನೀರು ಬೆರೆಸಿ ॥ಕಲ್ಯಾಣವೇ॥ ಭೀಮನ ಗುಡ್ಡಕ್ಕೆ ನೀರಾದರೆ ಬೆರಿಸ್ಯಾವು ನೀರು ಭೋಜನಕ್ಕೆ ಹೊರಡೆಂದು ॥ ಕಲ್ಯಾಣವೇ॥ ನೀರು ಭೋಜನ ಮಾಡಿದರು ಸ್ವಾಮಿಯವರು ಸೀಗೆಯ ಬಾಗೆ ತೆಕ್ಕೊಂದು ॥ಕಲ್ಯಾಣವೇ॥ ಸೀಗೆ ಬಾಗೆಯ ತಕ್ಕೊಂಡು ಸ್ವಾಮಿಯವರು ನೀರು ಭೋಜನಕ್ಕೆ ಹೋದಾರು ॥ಕಲ್ಯಾಣವೇ॥ ನೀರು ಭೋಜನ ಮಾಡಿದರು ಸ್ವಾಮಿಯವರು ಒಳ್ಳೊಳ್ಳೆ ಪಂಚೆ ಉಟ್ಟಾರು ॥ಕಲ್ಯಾಣವೇ॥ ಪಾಗ ಮುಂಡಾಸ ತಲೆ ಮೇಲಿಟ್ಟುಕೊಂಡು ನೂಲಿನ ಜನಿವಾರ ಹೆಗಲಲ್ಲಿ ॥ಕಲ್ಯಾಣವೇ॥ ನೂಲಿನ ಜನಿವಾರ ಹೆಗಲ ಮೇಲಿಟ್ಟುಕೊಂಡು ನೀಟಾದ ನಾಮಗಳ-ಧರಿಸ್ಯಾರು ॥ಕಲ್ಯಾಣವೇ॥ । ನೀಟಾದ ನಾಮಗಳ ಧರಿಸ್ಯಾರು ಸ್ವಾಮಿಯವರು ಬೆಳ್ಳಿಗಿಂಡಿಯ ಹಿಡಿದಾರು। ಬೆಳ್ಳಿ ಗಿಂಡಿಯ ಬೆಳಗ್ಯಾರು ಪಾತಾಳದ ಪನ್ನೀರ ಹಿಡಿದಾರು ॥ಕಲ್ಯಾಣವೇ॥ ಕಾಗೆ ಮುಟ್ಟದ ನೀರು ಜೋಗಿ ತುಳಿಯದ ನೀರು ಪಾತಾಳದಿಂದ ಪನ್ನೀರು ॥ಕಲ್ಯಾಣವೇ॥ ಪಾತಾಳದ ಪನ್ನೀರ ಹಿಡಿದಾರು ಸ್ವಾಮಿಯವರು ನಾಗಾಬೆತ್ತವ ಕೈಯಲ್ಲಿ ॥ಕಲ್ಯಾಣವೇ॥ ನಾಗ ಬೆತ್ತವ ಕೈಯಲ್ಲಿ ತೆಕ್ಕೊಂಡು ಹೂವಿನ ತೋಟಕ್ಕೆ ನಡೆದಾರು ॥ಕಲ್ಯಾಣವೇ॥ ತನ್ನರಮನೆಗೆ ನಡೆದಾರು ಸ್ವಾಮಿಯವರು ತಾಯವ್ವ ತಾಯವ್ವಯಿತ್ತ ಕೇಳಿ ॥ಕಲ್ಯಾಣವೇ॥ ತಾಯವ್ವ ತಾಯವ್ವಯಿತ್ತ ಕೇಳಿ ತಾಯವ್ವ ಕನ್ಯೆಗೆ ಧಾರೆ ಒದಗೀತು

॥ಕಲ್ಯಾಣವೇ॥ ಕನ್ನೆಗೆ ಧಾರೆ ಒದಗೀತೆಂಬುದ ಕೇಳಿ ಕನ್ನೆಯರ ಮನೆಗೆ ಹೋಗುತ್ತೇವೆ. ॥ಕಲ್ಯಾಣವೇ॥ ಸಂದಾದೀವಿಗೆಗೆ ಆರೈದು ಶರಣಾ ಮಾಡಿ ತಾಯಿ ಪಾದಕೆ ಶರಣೆಂದ ॥ಕಲ್ಯಾಣವೇ॥ ತಾಯಿ ಪಾದಕ್ಕೆ ಶರಣಾವ ಮಾಡಿ ಮುತ್ತಿನ ಮೆಟ್ಟುಕಲ್ಲು ಇಳಿದಾರು ॥ಕಲ್ಯಾಣವೇ॥ ಮುತ್ತಿನ ಮೆಟ್ಟುಕಲ್ಲು ಇಳಿದಾರು ಸ್ವಾಮಿಯವರು ಕನ್ನೆ ಅರಮನೆಗೆ ಹೋದಾರು ॥ಕಲ್ಯಾಣವೇ॥ ಸುಗ್ಗಿ ಮರದಡಿಯಲ್ಲಿ ಸುಗ್ಗಿ ಬರುವ ಹಾರುವಯ್ಯ ಕನ್ನೆಗೆ ಧಾರೆ ಒದಗೀತು । ಕನ್ನೆಗೆ ಧಾರೆ ಒದಗೀತೆಂಬುದ ಕೇಳಿ ಕನ್ನೆಯರ ಮನೆಗೆ ಹೋಗುತ್ತೇವೆ. ॥ಕಲ್ಯಾಣವೇ॥ ಹಲಸಿನ ಮರದಡಿಯಲ್ಲಿ ಹತ್ತಿ ಬರುವ ಹಾರುವಯ್ಯ ಕನ್ನೆಗೆ ಧಾರೆ ಒದಗೀತು ॥ಕಲ್ಯಾಣವೇ॥ ಕನ್ನೆಗೆ ಧಾರೆ ಒದಗೀತೆಂಬುದ ಕೇಳಿ ಕನ್ನೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಬಾಳೆ ಮರದಡಿಯಲ್ಲಿ ಬಗ್ಗಿ ಬರುವ ಹಾರುವಯ್ಯ ಮನೆಗೆ ಧಾರೆ ಒದಗೀತು ॥ಕಲ್ಯಾಣವೇ॥ ಕನ್ನೆಗೆ ಧಾರೆ ಒದಗೀತೆಂಬುದ ಕೇಳಿ ಕನ್ನೆಯರ ಮನೆಗೆ ಹೋಗುತ್ತೇವೆ ॥ಕಲ್ಯಾಣವೇ॥ ಕಂದನ ಕೈ ಕೆಳಗೆ ಕನ್ನೆಯ ಮೇಲೆ ಕನ್ನೆಗೆ ಧಾರೆ ಎರೆದಾರು ॥ಕಲ್ಯಾಣವೇ॥ ಕನ್ನೆಯ ಕೈ ಕೆಳಗೆ ಕಂದನ ಕೈ ಮೇಲೆ ಕಂದಾಗೆ ಧಾರೆ ಎರೆದಾರು ॥ಕಲ್ಯಾಣವೇ॥ ಕಂದಾನ ಕೈ ಕೆಳಗೆ ಕನ್ನೆಯ ಕೈ ಮೇಲೆ ಧಾರೆ ಎರೆದಾರು ॥ಕಲ್ಯಾಣವೇ॥

12. ಹಾಲು ತುಪ್ಪ ಕುಡಿಸುವಾಗ ಹೇಳುವ ಶೋಬಾನೆ :

ಬಟ್ಟಾಲು ತೊಳೆದಿರಿಸಿ ಪಟ್ಟೆಂಯ ನೆರಯವಳೇ ಸಣ್ಣ ಮುತ್ತಿನ ಕೊರಳವಳೆ। ಸಣ್ಣ ಮುತಿನ ಕೊರಳವಳೆ ತಾರಮ್ಮ ಬಟ್ಟಾಲು ತೊಳೆದು ಎಡೆ ಮಾಡಿ ॥ ಕಿನ್ನಾಲು ತೊಳೆದಿರಿಸಿ ಮುತ್ತಿನ ನೆರಿಯವಳೆ ಸಣ್ಣ ಮುತ್ತಿನ ಕೊರಳವಳೆ । ತಾರಮ್ಮ । ಕಿನ್ನಾಲು ತೊಳೆದು ಎಡೆಮಾಡಿ । ತಾಳಿಯ ಕರೆದ್ಹಾಲು ಕೆಂದೆಯ ಕರೆದ್ಹಾಲು ಕೆಂದೆಯ ಕರೆದ ನೊರೆ ಹಾಲು ಸಕ್ಕರೆ । ಸ್ವಾಮಿಗೆ ಅರ್ಪಿಸಿದ ನವಧಾನ್ಯ ॥ಕೆಂದೆಯ ಕರೆದ್ಹಾಲು। ಕೆಂಪಿಯ ಕರೆದ ನೊರೆಹಾಲು ಸಕ್ಕರೆ ॥ ದೇವರಿಗೆ ಅರ್ಪಿಸಿದ ನವಧಾನ್ಯ ॥ ಅಕ್ಕರ ದಿನದಲ್ಲು ಸುಕ್ರ ಮುತ್ತಿನಾರತಿಯ । ಅಕ್ಕರದಾರತಿಯ ಬೆಳಾಗಿರೆ ॥ ಸಕ್ರಮ ದಿನದಲ್ಲು ಸುಕ್ರ ಮುತ್ತಿನಾರತಿ । ಶ್ರೀ ಮಂದಾರತಿಯ ಬೆಳಾಗಿರೆ ॥ ನೊರಲೆಯ ಎಲೆ ತಂದು ಬೊಗ್ಗಿಸಿ ದೊನ್ನೆಯ ಕಟ್ಟಿ ನುಗ್ಗಮ್ಮನಂತೆ ಮಡದಿಯವರು । ನುಗ್ಗಮ್ಮನಂತೆ ಮಡದಿಯರು ಕನ್ನೆಗೆ ಹಾಲು ತುಪ್ಪ ಎಡೆಮಾಡಿ । ಬಾಳೆಯ ಎಲೆ ತಂದು ಬೊಗ್ಗಿಸಿ ದೊನ್ನೆಯ ಕಟ್ಟಿ ಸುಗ್ಗಮ್ಮನಂತೆ ಮಡದಿಯರು । ನುಗ್ಗಮ್ಮನಂತೆ ಮಡದಿಯರು ನಿಸ್ತ್ರೆಗೆ ಹಾಲು ತುಪ್ಪ ಯೆಡೆಮಾಡಿ ।

13. ಆ) ಬಾಗಿಲು ತಡೆಯುವ ಹಾಡು :

ರಂಗನ ಪರಿಣಾಯ ಐದನೆ ದಿವಸದಿ ಮಂಗಳೋಕುಳಿಯನಾಡಿ ಭೂಸುರರಂತ ರಂಗದಿಷ್ಟವ ನೀಡಿ । ವಿನೋದದೊಳೊಡಗೂಡಿ ಬರುತಿರಲು । ನೋಡಿ ಅಂಗಜನ ಮದದಾನಯಂದದಿ। ಅಂಗನೆಯರ ಸಮ್ಮೇಳದಿಂದಲಿ ಅಂಗನಾಮಣಿ ರುಕ್ಮಿ ರೂಪಿಣಿ ರಂಗನಾಥನ ತಡೆದು ದ್ವಾರದಿ ತಂಗಿ ಸೌಭದ್ರೆ ನುಡಿದಾಳು ॥ಶೋಬಾನೆ॥೧॥ ವಲ್ಲಭೆಯನು ಕರಕೊಂಡು ವಿನೋದದಿ ಎಲ್ಲಿಗೆ ಗಮನವಿದು ಅಣ್ಣಯ್ಯ ಕೇಳ್ ನಿಲ್ಲೊಂದು ಮಾತುಂಟನ್ನೂ ಈ ಲೋಕಕ್ಕೊಡೆಯ ಲಕ್ಷ್ಮಿವಲ್ಲಭನೆ। ನೀನೊಲಿದು ಕಡುಕೃಪೆಯಲ್ಲಿ ಯನಗಿಷ್ಟವನು ಈ ಕ್ಷಣದಲ್ಲಿ ಪಾಲಿಪುವನಕ ಕದಬಿಡೆ ದಯ ಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥೨॥ ಆ ಕಮಲಾಕ್ಷಿಯರುಗಳ ಸಮ್ಮೇಳದಿ ರಾಕೆಂದುಮುಖಿಯೇ ನೀನು। ದ್ವಾರದೊಳೆನ್ನ ಯಾಕವ್ವ ತಡೆದೇ ನೀ ಬೇಡಿಕೊ ಬೇಕಾದ ಬಯಕೆಯನು ನೀ ಪೇಳಿದುದನು ಲೋಕ ಪೀರೇಳರೊಳಗೆ ಇದ್ದರು ನಾ ತರಿಸಿ ಕೊಡಿಸುವೆನು ಈ ಕ್ಷಣ। ಕೋಕಿಲಾ ಸ್ವರೆ ಕಂಬುಕಂದರೆ ಪಾಕ ಶಾಸನ ಸುತನ ಪ್ರಿಯಳೇ ॥ ಕದಬಿಡೆ ತಂಗಿ ಮೋಹನಾಂಗಿ ॥೩॥ ಲೋಕ ನಾಯಕನೇ ನಿನ್ನುದರದಿ ಜನಿಸಿದ ನೋಕಯಿರೇಳಿರಲಿ । ನೀನರಿಯದ ಲೋಕ ಪ್ರಪಂಚದಲ್ಲಿ ಯಾವುದು ಸಾಕು ಸಾಕೆನ್ನೊಳೀ ಮಾತ ತಿಳಿದವನು ನೀನು । ಲೋಕಬಾಧಕರಾದ ದುರುಳ ರಕ್ಕಸರನು ಸಂಹರಿಸಿ ಲಗ್ನದಿ ಆಕರಿಸಿ ಬರುವಾಗ ತಡೆದ ವಿವೇಕ ಮನದೊಳಗರಿತು ಈ ಕ್ಷಣ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥೪॥ ಪನ್ನಗವೇಣಿ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು । ಸಣ್ಣ ನಡುವಿನ ಹೊನ್ನಿನೊಡ್ಯಾಣವನು ಜೋಡಾಗಿಹ ರನ್ನದ ನೇವಳವನು । ಸರಪಣೀಯನು ಚಿನ್ನದುಂಗುರ ದೋರೆ ಚಳಕಿ ಸುವರ್ಣ ಕಡಗವು ದಂಕಿ ಹಿಂಬೆಳೆಯನ್ನು ನಾ ನೀನಗೀಗ ಕೊಡುವೆನು । ಸುಗುಣೆ ಕೇಳೆಲೆ ತಡೆಯ ದೀಕ್ಷಣ ಕದಬಿಡೆ ತಂಗಿ ಮೋಹನಾಂಗಿ ॥೫॥ ಪನ್ನಗಶಯನ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು। ಸಣ್ಣ ನಡುವಿನ ಹೊನ್ನಿನೊಡ್ಯಾಣವನು । ಜೋಡಾಗಿಹ ರನ್ನದ ನೇವಳವನು । ಸರಪಣೀಯನು ಚಿನ್ನದುಂಗುರ ದೋರ ಚಳಿಕೆ ಸುವರ್ಣ ಕಡಗವು ವೆಂಕಿ ಹಿಂಬಳೆಯನು ಎನಗೆನ್ನವ್ವ ಕೊಡುವರು ಹರುಷದಿಂದಲಿ ಮನ್ಮನೋರಥ ದಯಾ ಮಾಡಣ್ಣಯ್ಯ ಶೀ ಕೃಷ್ಣಯ್ಯಾ ॥೬॥ ಚಿತ್ತದಿ ಅರಗಿಣಿ ನೀ ಕೇಳು ಕಠ್ಠಾಣೆ ಮುತ್ತಿನ ಸರಗಳನೂ । ಶೋಭಿಪನವರತ್ನದ ಮಾಲೆಯನು ಮೇಲೊಪ್ಪುವ ಕುತ್ತಿಗೆಯ ಪದಕವನು। ಏಕಾವಳಿಯನು । ಪುತ್ಥಳೀ ಸರಮಾಲೆ ಸರಪಣಿ ಕುತ್ತಿಗೆಯ ಮೂಗುತ್ತಿಯ ಸರಸಿಜನೇತ್ರೆ ನಾ ನಿನಗೀಗ ಕೊಡುವೆನು ತರುಣಿರನ್ನಳೆ ಕೀರಬಾಷಿಣಿ ॥ ಕದಬಿಡೆ ತಂಗಿ ಮೋಹನಾಂಗಿ॥೭॥ ಚಿತ್ತ ಜನಕನೇ ನೀ ಕೇಳು ಕಠಾಣೆ ಮುತ್ತಿನ ಸರಗಳನು

। ಶೋಭಿಪ ನವರತ್ನದ ಮಾಲೆಯನ್ನು । ಮೇಲೊಪ್ಪುವ ಕೆತ್ತಿಗೆ ಪದಕವನ್ನು ಏಕಾವಳಿಯನು ಪುತ್ಥಳೀ ಸರವಾಲೆ ಸರಪಣಿ ಕೆತ್ತಿಗೆಯ ಮೂಗತಿಯ ಸರಸಿನೇತ್ರಯುನಗೆನಪ್ಪ ಕೊಡುವರು । ಹರುಷದಿಂದಲಿ ಮನ್ಮನೋರಥ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯ ॥೮॥ ಸರಸಿ ಜಾಂಬಕ ಕೇಳು ಕರು ಎಮ್ಮೆಗೋವ್ಗಳು ತುರುಗಾವಲರುಗಳು। ಸೀನಾಳುವ ಸರಿಂದುರ್ಘ ಧರಣಿಯೊಳು ನೂತನವಾದವರಹೀತವಸನಂಗಳು । ಹಯವಾರಣಂಗಳು ॥ ಮೆರೆವ ದಾಸಿಯರುಗಳ ಗಡಣದಿ ಪರಮ ದ್ರವ್ಯಗಳೆಲ್ಲ ಕವಿಕೋಪ್ವರಿಗೆ ಸಾವಿರವೀಗ ಕೊಡುವೆನು । ತರುಣೆ ರನ್ನರೆ ಕೀರಬಾಷಿಣಿ ಸಹ ಹಿರಿಯಕ್ಕ ಕದಬಿಡೆ । ತಂಗೀ ಮೋಹನಾಂಗಿ ॥೯॥ । ಹರುಷದಿಂದಲಿ ಮನ್ಮನೋರಥ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯ ॥೧೦॥ ಏನ ಹೇಳಿದರು ಸಮ್ಮತವಿಲ್ಲಾ ನಿನಗೆ ಮತ್ತೇನುಂಟು ಮನಸಿನೊಳು ಸಿಕ್ಕಿಯ ಗಾಟ್ಟನ್ನಾಗೆ ಹೇಳಲೆಮ್ಮೊಳು । ನಿನಗೆ ಅನುಮಾನವಿಲ್ಲದೆ ಎನ್ನೊಳು ಈ ಸಭೆಯೊಳು ಸಾನುರಾಗದಿ ನೀನು ಬೇಡಿಕೊ ಮಾನಿನೀಯರ ಕುಲ ಶಿರೋಮಣಿ ಜಾಣೆ ಮನ್ಮಥನಾಣೆ ಸರಸ ಪ್ರವೀಣೆ ನೀನಾಧೆ ಬೇಗದಿ ಕದಬಿಡೆ ತಂಗಿ ಮೋಹನಾಂಗೀ ॥೧೧॥ ಕತಲ ಶಯನ ನಿನ್ನ ಮಗಳೆನ್ನ ಮಗನಿಗೆ ಕೊಡಬೇಕೆಂದೆನಾತ ನಾನು ಈ ಸಮಯದಿ ತಡೆದಿಹೆ ಬಾಗಿಲನು । ವೀಳ್ಯವನ್ನಿತ್ತು ಕೊಡಿಸೆನಗಭಯವನು ನಿನ್ನಾತ್ಮಜೆಯನು ಕೊಡುವೆನ್ನಯ ಕುವರಗೆನುತಲಿ ದೃಢದಿ ಭಾಷೆಯ ನಿತ್ತರೀಕ್ಷಣ ಬಿಡುವೆ ನಾ ತಡೆದಿಹ ಕವಾಟವ । ತಡೆಯ ದೀಕ್ಷಣ ದಾನವಾಂತಕ ದಯಮಾಡಣ್ಣಯ್ಯ ಶ್ರೀಕೃಷ್ಣಯ್ಯಾ ॥೧೨॥ ನಂದನಂದನ ಚೆಲ್ವ ಕುಂದನ ವದನೆಪೂರ್ಣ ಚಂದಿರಮುಖಿಯೆ ಕೇಳು । ನಾ ಬಯಸುವೆ ಕಂದನಗೆ ಮೊದಲು ಚೊಚ್ಚಲು ಮಗಳೆಂದು ನೀರ ವರದೆನ್ನೆಳು । ಈ ಸಭೆಯೊಳು ಹಿಂದೆ ಮಾಡಿದ ಸುಕೃತವೆಂತಿಹುದೆಂದು ಕಂಡವರಾರು ಲೋಕದಿ। ಕಂದ ಮೊದಲೆನಗಾದರದಕೇ । ನೆಂದು ವರ್ಣಿಸು ಕಂಬುಕಂಠಿಣಿ ॥ ಕದಬಿಡೆ ತಂಗೀ ಮೋಹನಾಂಗೀ ॥೧೩॥ ಗಂಡುಮಗ ನುದಿಸಿದರೆ ಮಾಂಡಲಿಕರ ಗಂಡಾಗಿ ತೇಜದಲಿ ಅಳಿರಲಿ ಭೂಮಂಡಲ ಸೌಖ್ಯದಲಿ ಕೀತಿಯ ನೊಡಗೊಂಡು ವಿನೋದದಲಿ ಹೆಣ್ಣಾದರೆನ್ನ ಚಂಡ ವಿಕ್ರಮಕುವರಗೆನುತಲಿ ಪುಂಡರೀಕ ದಳನಯನ ಜಗದುದ್ದಂಡ ಮೂರುತಿ। ಈಶ ಸಖಮಾರ್ತಾಂಡ ಶತಕೋಟಿ ಪ್ರಕಾಶವೇ ದಯಮಾಡಣ್ಣಯ್ಯ ಶ್ರೀ ಕೃಷ್ಣಯ್ಯಾ ॥೧೪॥ ಮತ್ತೊಂದು ಮಾತುಂಟು ನೀ ಕೇಳು ಸೌಭದ್ರೆ ಅತ್ತಿಗೆಯೊಡನೆ ನೀನು । ನಾಳೆಗೆ ಬದಲುತ್ತರ ಬರುವುದನು ಈ ಹೊತ್ತೆ ನಿವೃತ್ತಿಯ ಮಾಡಿದನು ಜನರಿದಿರೊಳಿನ್ನು। ಮತ್ತೆ ನೀ ನುಡಿದಂತೆ ಭಾಷೆಗೆ ವೀಳ್ಯವನಿತ್ತು ಕೊಡಿಸುವೆ ಮತ್ತ ಕಾಶಿನಿ ಮಂದಗಾಮಿನಿ । ವೃತ್ತ ಕುಂಜೆ ನೀನೀಗ ದಯವಿಡೆ

ಕದಬಿಡೆ ತಂಗೀ ಮೋಹನಾಂಗೀ ॥೧೫॥ ಜಾಣೆಯರರಸಿ ಎನ್ನಣ್ಣನ ಪಟ್ಟದರಾಣಿ ಕಲಾಪಿ ವೇಣಿ । ಸುಲಲಿತ ಗುಣಶ್ರೇಣಿ ಪರಮ ಕಲ್ಯಾಣಿ । ಸ್ತ್ರೀಯರೊಳು ಕಣ್ಮಣಿ ಕಲಕೀರವಾಣಿ । ಶತಪತ್ರ ಪಾಣಿ । ಮೀನಕೇತನ ಪಿತಗೆ ಕಳುಹಿಸಿ ತಾನು ಲೇಖನ ಬರೆದು ಅಣ್ಣನ ಮಾನಭಂಗಿಸಿ ಓದಿ ಬಂದ ಪ್ರವೀಣೇ ಗುಣನಿಧಾನೆ ಬೇಗದಿ ಬಿಡೆ ನಿನ್ನ ಮಗಳ ಕೊಡಬೇಕು ॥೧೬॥ ಸಾರಸೋಪಮಪಾಣೆ ಕಲಕೀರ ಭಾಷಿಣೆ ಸಾರಾಯಿ ಸಮಗಂಭೀರೆ ಮಾತಿನೊಳತಿ ಶೂರೆ ನಿನಗೆ ಭಾಪುರೆ । ಎನಗಿಷ್ಟುಪಚಾರ ಮಾಡಿದೆಯೆ ನೀರೆ ಸರಸ ವೈಯಾರೆ । ಚಾರುತನದಿ ಸನ್ಯಾಸಿ ವೇಷದಿ ಚೋರ ತನದಲಿ ಸೇರಿದವನೊಳು ಧೀರ ಓರಿಯಣ್ಣನಿಗೆ ವಂಚಿಸಿ ಜಾರಿ ಬಂದ ಮಹಾನುಭಾವಳೆ ಕರೆತಾರೆ ನಿನ್ನ ಕುವರನ್ನ ॥೧೭॥ ನೂತನಗಾರ್ತಿ ಕೇಳ್ ಮಾತಿಗೆ ಮಾತುಂಟು ಯಾತಕೀ ಮಾತುಗಳು ತೋರಿಕೆ ಜಗನ್ಮಾತೆ ನಿನ್ನಯ ಮಗಳು । ನಲಿನಲಿದೆನ್ನನು ಜಾತನು ಎದುರಿನೊಳು ಬರುವ ನೀ ಕೇಳು ಮಾತು ನಿಶ್ಚಯವೆಂದು ಅತಿ ಸಂಪ್ರೀತಿಯಲಿ ವೀಳ್ಯವನು ಭೀಷ್ಮಕ। ಜಾತೆ ಮೂಜಗ ಮಾತೆ ಸರಸ ವಿಖ್ಯಾತ ಅಣ್ಣನ ಪ್ರೀತೆ ರುಕ್ಮಿಣಿ ಬಿಡೆ ನಿನ್ನ ಮಗಳ ಕೊಡಬೇಕು ॥೧೮॥ ಮಂದಹಾಸದೊಳರವಿಂದ ನೋಟಸೆಯರಿಗೆಂದು ಮಾತಿಗೆ ಮಾತನ್ನು ಅಡುತ ನಗುತೆಂದು ಚಿನ್ಮಯರೂಪನು। ಒಡಂಬಡಿಸ್ಯಾ ನಂದದೊಳರಸಿಯನು ಸೌಭದ್ರೆಯನು ಎಂದು ವಿನಯೋಕ್ತಿಯನು ಪೇಳುತ । ಇಂದು ಮುಖಿಯೆ ಕೇಳು ನಿನ್ನಯ ಕಂದಗೆನ್ನಯ ಕುವರಿ ಕೊಡುವೆನು ಎಂದು ವೀಳ್ಯವನೀಯಲಕ್ಷಣ ಜಾಲೆ ಸಾರಿದಳು ಸಭೆಯೊಳು ॥೧೯॥ ಪಾರೋಹಿತರಿಗೆ ಸಾಕ್ಷಿಯನಿಟ್ಟು ಮುತ್ತಿನ ದ್ವಾರ ಬಿಟ್ಟಳು ನಗುತ ।ಹರುಷದಿ ತನ್ನ ನಾರಿ ರುಕ್ಮಿಣಿ ಸಹಿತ ಮನಸಿಜನ ಪಿತ ಭೂರಮಣ ಭೀಷ್ಮ ಕನವರಸುಕುಮಾರಿ ಸಹ ಒಪ್ಪಿರಲು ಹಸೆಯಲಿ । ಚಾರುಕರುಣಾಕರನ ಮಕುಟದಿ ಭೂರಿ ಸಂತೈಸಿದರು. ಗಗನದಿ ನಾರಿಯರು ಸೇಸೆ ತಳಿದರು ಸೋಬಾನೆ ॥೨೦॥ ಮಂಗಳಂ ಯದುಕುಲತಿಲಕ ಗೋಪಾಲಗೆ ಮಂಗಳಂ ಮಾಧವಗೆ ಮತ್ಸ್ಯಗೆ ಜಯಮಂಗಳಂ ಕೂರ್ಮನಿಗೆ ವರಾಹಗೆ ಶುಭಮಂಗಳಂ ನರಸಿಂಹಗೆ । ವಾಮನವತಾರೆಗೆ ಮಂಗಳಂ । ಶ್ರೀ ಪರಶುರಾಮಗೆ ಮಂಗಳಂ ಶ್ರೀರಾಮ ಕೃಷ್ಣಗೆ ಮಂಗಳಂ । ಶ್ರೀ ಬೌದ್ಧಕಲ್ಕಿಗೆ । ಮಂಗಳಂ । ಶ್ರೀ ಕೃಷ್ಣರಾಯಗೆ ಮಂಗಳಾರತಿಯ ಬೆಳಗಿರೆ। ಸೋಬಾನೆ ॥೨೧॥

ಆ) ಅಂದು ಗೋಕುಲದಿಂದ ನಾರಾಯಣ ಶ್ರೀಕೃಷ್ಣ ಮಂಟಪದ ನಡುಗಾಗಿ ಬರುವ ಹಾಗೆ ॥ ಮಂಟಪದ ನಡುಗಾಗಿ ಬರುವ ಹಾಗೇನಣ್ಣಯ್ಯ ಮಡದಿ ಬಿಡುಗೊಂಡು ಬರುತ್ತಾರೆ. ಮಡದಿ ಬಿಡುಗೊಂಡು ಬರುವಾಗ ಅಣ್ಣಯ್ಯ ತಂಗಿಯ ಕದಗಾಳ ತಡೆದಾಳು ॥ ತಂಗಿಯು ಕದಗಾಳ ತಡೆದಾಳು ತಂಗ್ಯಮ್ಮ ನೀ ತಡೆದ ಕದವಾ ಬಿಡು ಬೇಗ ನಾ

ತಡೆದ ಕದವಾ ಬಿಡುವಲ್ಲೆ ಪ್ರತಿಯೊಂದು ಮಾತು ನುಡಿ ಬೇಗ ॥ ದೇವ ಉಂಬಳಿ ಕೊಡುವೆ । ಶೇಷ ಉಪ್ಪರಿಕೆ ಕೊಡುವೆ ನೀ ಬಿಡು ಬೇಗ । ದೇಶ ಉಂಬಳಿ ನನಗುಂಟು ಶೇಷ ಉಪ್ಪರಿಕೆ ನನಗುಂಟು । ಎನ್ನುವ ನೀ ನನಗೆ ಕೊಡುವೆನ್ನಮ್ಮ । ಪ್ರೀತಿಗೊಂದು ಮಾತು ನುಡಿ ಬೇಗ ॥

ಇ) ಅಂಗನ ಮಣಿಯೇ । ಈಗ ಬಂದೆ ಬಿಡಿರಾ ಬಾಗಿಲ ತೆರೆಯಿರಿ ಕದಗಳಾ। ರಂಗ ರುಕ್ಮಿಣಿ ಬಂದಗಾಯಿತು. ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ॥ ತಂದೆ ತಾಯಿಯರ ನಾ ಬಿಟ್ಟು ಬಂದೆ। ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ಅಂಗನ॥ ಅಣ್ಣ ತಮ್ಮಂದಿಯರ ಆಟ ಬಿಟ್ಟು ನಾ ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ । ಅಕ್ಕ ತಂಗಿಯರ ಕೊಟ್ಟು ಬಿಟ್ಟು ನಾ ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ ಅಂಗನ ॥ ಅತ್ತೆ ಮಾವರ ಗುಣ ಕಂಡು ನಾ ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ ಬಾವ ಮೈದುನರ ಆಟ ನಾ ಕಂಡುಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ । ಅತ್ತಿಗೆ ನಾದಿನಿಯರ ಹಿತಾ ಕಂಡು ನಾ ಬಂದೆ ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ॥ ಅಂಗನ ಮಣಿಯೇ ರಂಗ ಬಂದೇ । ರಂಗಾ ರುಕ್ಮಿಣಿ ಬಂದಗಾಯಿತು ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ॥

**14) ಹೆಣ್ಣು ವಹಿಸಿ ಕೊಡುವ ಹಾಡು :**

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು । ನಿಮ್ಮ ಮಡಿಲೊಳಗಿಡಲು ತಂದಿರುವೆವೂ ॥೧॥ ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು । ನಿಮ್ಮ ಮನೆಯನು ತುಂಬಲೊಪ್ಪಿಸುವೆವೂ ॥೨॥ ಮರೆಮೋಸ ಕೊಂಕುಗಳನರಿಯಳಿವಳು। ಇನಿತು ವಿಶ್ವಾಸವನು ಕಂಡಿಯುವಳಿವಳು ॥೩॥ ಕಷ್ಟಗಳ ಸಹಿಸದೆಯೆ ಕಾಣದೆಯೆ ಬೆಳೆದವಳು। ಸಲಹಿಕೊಳ್ಳಿರಿ ಮಗುವನ್ನೊಪ್ಪಿಸುವೆವೂ ॥೪॥ ಕಠಿಣಗಳ ನೆಳಲ್ ಸುಳಿಯಲುದುರಿ ಬಾಡುವಳು । ಹಿರಿಮಂಜು ಬಳಲಿದ ಹೂಪಿನಂತೆ ॥೫॥ ಸುಖದಲ್ಲಿ ದುಃಖದಲ್ಲಿ ಯೆಲ್ಲೆದೆಸೆಯಿರಪಿನಲಿ । ನಿಮ್ಮ ಪಾಲಿಗೆ ನಿಲುವ ಕುವರಿಯಿವಳೂ ॥೬॥ ವಿಮಗವಳು ನೀಡುತಿಹ ಹಾಲು ಹಣ್ಣುಗಳು ಸವಿ । ಎಂದೆಂದೂ ಇವಳ ನಡೆ ನಿಮ್ಮ ಪರವಾಗಿ ॥೭॥ ನಿಮ್ಮ ಕೀರುತಿ ಬೆಳೆಯಲಿವಳ ಸೌಜನ್ಯದಲಿ । ನಿಮ್ಮ ಕುಲಶೀಲಗಳು ಪರಿಮಳಿಸಲೀ ॥೮॥ ನಿನ್ನ ಮಡದಿಯ ಕೊಂಡು ಸುಖವಾಗಿರು ಮಗುವೇ । ನಿಮ್ಮ ಸೊಸೆ ಸೋದರಿಯು ಕೊಳ್ಳಿರಿವಳಾ ॥೯॥ ಜೀವನದ ಸಾಗರದಿ ಸಂಸಾರ ನೌಕೆಯನು । ಆಧರಿಪ ಹುಟ್ಟಿನಂತಿಹ ಜೀವಿಯವಳೂ ॥೧೦॥ ಕೈ ಬಿಡದೆ ಕಾವುದ್ಯೆ ಪ್ರೇಮದಿಂದನು ದಿನವು। ಇಂದಿನಿಂದೆಂದಿಗೂ ನಿಮ್ಮವಳು ಮುಂದೆ ॥೧೧॥ ಅತ್ತೆ ಮಾವಂದಿರನು ತಾಯ್ತಂದೆಯೆಂದರಿತು । ನಿತ್ಯ ನಿರ್ಮಲೆಯಾಗಿ ಸೇವೆಯನು ಮಾಡು ॥೧೨॥

ಪತಿಯೇ ದೇವರು ನಿನಗೆ, ಬೇರೆ ದೇವರು ಇಲ್ಲ ।ಪತಿಯೇ ಗತಿ ನಿನಗೆ ಪತಿಯೇ ಸರ್ವಸ್ವಗೂ ॥೧೩॥ ಪಾದಸೇವೆಯ ಮಾಡು ದಾಸಿಯಂತಿರು ನೀನು । ಪತಿಯ ಗೃಹಕೃತ್ಯದೊಳು ಮಂತ್ರಿ ನೀನವಗೆ । ॥೧೪॥ ಉಣಿಸುಗಳನೀಯಲಾತನ ಮಾತೆಯೇ ನೀನು । ಪ್ರೀತಿಯಿಂದೊಡಗೂಡಿ ಸಂತಸದಿ ಬಾಳೂ ॥೧೫॥ ಹೆತ್ತವರ ಮನೆಗಿಂದು ಹೊರಗಾದೆ ನೀಮಗಳೆ । ಆ ಮನೆಯೇ ಅವರೇ ನಿನ್ನವರು ಮುಂದೆ ॥೧೬॥ ಅವರೇ ತಾಯ್ಗಳು ಸಖಿರು ಭಾಗ್ಯವನ್ನು ಬೆಳೆಸುವವರು । ಅವರೇ ದೇವರು ನಿನ್ನ ದೇವರುಗಳೂ ॥೧೭॥ ಆವ ಬಳುವಳಿ ಕೊಡಲಿ ಮಗಳೆ ನಾ ನಿನಗೆ । ಆವ ವಸ್ತುವನಿತ್ತು ಕಳುಹಿಸಲೀ ಮನೆಗೆ ॥೧೮॥ ಮಾವನಾ ಮಗಗಿಂದು ತೆರಳುವಾ ಮಗಳೆ । ದೇವರಿತ್ತಿಹ ವಸ್ತು ವಾಹನವ ಕೊಡಲೇ ॥೧೯॥ ಬಡತನದಿ ಬಂದು ಬಡವಾಗಿರುತಿರ್ಪ । ಕಡು ಮಮತೆಯಲಿ ನಿನ್ನ ಸಾಕಿ ಸಲಹಿದೆನು ॥೨೦॥ ಅಡಿಗಡಿಗೆ ಬಳಲಿರ್ದ ತೊಡರುಗಳ ಸಹಿಸಿ । ಬಡತನದ ಕಡಲಿನಲಿ ದಡ ಸೇರದಿರ್ದ ॥೨೧॥ ಮಗಳೇ ನಾನೇನು ಕೊಡಲಿ ನಿನಗೆ । ಹೋಗುವಾಗ ಅಗಲಿಕೆಯ ಉಪದೇಶ ನಿನಗೆ ॥೨೨॥ ಪತಿಗೆ ಸತಿಯೆಂಬ ಶ್ರುತವಚನವನು । ಮತಿಯುತಳೇ ನೀ ನಡೆಸುತ್ತಾ ಬಾಳೆ ॥೨೩॥ ಪತಿಯ ಮಾತನು ಅಲ್ಲಗಳೆಯದಿರು ನೀನು । ಪತಿಯೇ ಪರದೈವವೆಂದು ನಂಬು ವಧುವೇ ॥೨೪॥ ನಿಲ್ ಕಣ್ಣೊರಸಿಕೊ ಮುದ್ದು ನೀನಳದಿರು । ತಾಯಿರಾ ತಂದೆಯಿರಾ ಪಡೆವಳಾ ॥೨೫॥ ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ । ತುಂಬಿದಾಯುಷ್ಯದಲ್ಲಿ ಬಾಳಿ ಬದುಕು ನೀ ಮಗಳೆ ॥೨೬॥

ಕಾಯಿದೆಯು ಒಳ್ಳೆಯ ಉಡುಪಿನಂತಿರಬೇಕು, ಅದು ಜನರನ್ನು ಹೊಂದುವಂತಿಬೇಕು, ಅವರ ಮೇಲೆ ಹೇರುವಂತಿರಬಾರದು.

*– ಕ್ಲೊರೆನ್ಸ್ ದೊರೊ*

ಧಿನಗಳು ಓಡುತ್ತಿವೆ, ಸಮಯ ಮತ್ತು ಸಮುದ್ರ ತರಂಗ ಯಾರನ್ನೂ ಕಾಯುವುದಿಲ್ಲ. ಶಕ್ತಿ ಇರುವಾಗಲೇ ಶಾಶ್ವತ ಸಂಪತ್ತನ್ನು ಸಂಪಾದಿಸು.

*– ಸುಭಾಷಿತ*

# ವೆಂಕಟರಮಣ ದೇವರ ಹರಿಸೇವೆ

ಗೌಡ ಜನಾಂಗದವರ ಕುಲದೇವರು ತಿರುಪತಿಯ ಶ್ರೀ ವೆಂಕಟರಮಣ ದೇವರು. ಗೌಡ ಜನಾಂಗದವರು ಪ್ರತಿ ವರುಷ ತಮ್ಮ ಕುಲದೇವರಾದ ಶ್ರೀ ವೆಂಕಟರಮಣ ದೇವರನ್ನು ಪೂಜಿಸಬೇಕೆಂದು ನಿಯಮ.

ಕೆಲವು ಕುಟುಂಬದವರು ಪ್ರತಿ ವರುಷವೂ ವೆಂಕಟರಮಣ ದೇವರ ಪೂಜೆ ನಡೆಸುತ್ತಾರೆ. ಕೆಲವು ಕುಟುಂಬಗಳು ಎರಡು ವರ್ಷಕ್ಕೊಂದಾವರ್ತಿ ಇನ್ನು ಕೆಲವು ಕುಟುಂಬಗಳಲ್ಲಿ ಕೆಲವು ವ್ಯಕ್ತಿಗಳು ಹರಕೆ ಮಾಡಿಕೊಂಡಿದ್ದರೆ ಮಾತ್ರ ಹರಿಸೇವೆ ನಡೆಸುವುದುಂಟು ಇನ್ನು ಕೆಲವು ಕುಟುಂಬಗಳಲ್ಲಿ ತಲೆಮಾರುಗಳಿಂದ ಹರಿಸೇವೆ ನಡೆಸದೆ ಇರುವವರೂ ಇದ್ದಾರೆ.

ವೆಂಕಟರಮಣ ದೇವರ ಪೂಜೆಗೆ 'ಹರಿಸೇವೆ' ಎಂತಲೂ 'ಹರ್ಷಯಿ' ಎಂತಲೂ ಹೇಳುವುದುಂಟು.

ಹರಿಸೇವೆಯನ್ನು ಹೆಚ್ಚಾಗಿ ಶನಿವಾರವೇ ಮಾಡುವುದು ರೂಢಿಯಾಗಿದೆ. ಸಾಧಾರಣವಾಗಿ ಬೆಳಗ್ಗೆ 9 ಗಂಟೆಗೆ ಪ್ರಾರಂಭಿಸಿ ಮಧ್ಯಾಹ್ನ 3 ಗಂಟೆಗೆ ಮುಗಿಸುವುದು ವಾಡಿಕೆ. ಇನ್ನು ಕೆಲವು ಸಂದರ್ಭಗಳಲ್ಲಿ ಬೇರೆ ದಿನ ಯಾ ಅನುಕೂಲಕ್ಕೆ ತಕ್ಕಂತೆ ಮಾಡುವುದುಂಟು.

ಕುಟುಂಬದವರೆಲ್ಲರೂ ಸೇರಿ ಅಥವಾ ಹರಕೆ ಹೇಳಿಕೊಂಡವರು 'ಹರಿಸೇವೆ'ಯ ದಿನ ಸಮಯ ನಿಶ್ಚಯಿಸಿ ಒಂದು ವಾರಕ್ಕೆ ಮೊದಲು ಕುಟುಂಬದ ಹಿರಿಯವನು ಯಾ ಕುಟುಂಬದಲ್ಲಿ ಹರಿಸೇವೆಗೆ ಭಕ್ತನಾಗಿ ನಿಲ್ಲುವವನು ಮಿಂದು ಮಡಿಯಾಗಿ ದೇವರನ್ನು ಭಜಿಸಿ ಪೂಜೆಗಾಗಿ ಬಾಳೆಗೊನೆಯನ್ನು ಕಡಿದು ತಂದು ವೆಂಕಟರಮಣ ದೇವರ ಮುಡಿಪು ಕಟ್ಟಿದ ಸ್ಥಳದಲ್ಲಿ ಗೊನೆಯನ್ನು ತೂಗು ಹಾಕುವನು.

ಹೀಗೆ ಗೊನೆ ಕಡಿದ ವ್ಯಕ್ತಿಯು ಹರಿಸೇವೆ ಮುಗಿಯುವ ತನಕ ಮಾಂಸಾಹಾರ ಸೇವಿಸಕೂಡದು. ಅಲ್ಲದೆ ಸೂತಕದ ಮನೆಗಳಿಗೆ ಹೋಗಕೂಡದು. ಸಾವು ತಿಥಿಗಳಿಗೆ ಹೋಗಕೂಡದು ಮತ್ತು ಒಂದು ವಾರ ಶುದ್ಧದಿಂದಿರಬೇಕೆಂದು ನಿಯಮ.

ಅನಂತರ ಹರಿಸೇವೆಯ ಸಲುವಾಗಿ ಆಹ್ವಾನ ಪತ್ರಿಕೆಯನ್ನು ಮುದ್ರಿಸಿ, ಯಾ ಬರವಣಿಗೆ, ಬಾಯಿ ಮಾತಿನ ಮೂಲಕ ಊರಿನವರಿಗೂ, ನೆಂಟರಿಗೂ ಮತ್ತು ಕುಟುಂಬದಿಂದ ವಿವಾಹ ಮಾಡಿ ಕೊಟ್ಟ ಹೆಣ್ಣಿನ ಕಡೆಯವರನ್ನೂ ಆಹ್ವಾನಿಸಿ ಕರೆಸಿಕೊಳ್ಳುವುದು ರೂಢಿಯಾಗಿದೆ.

ಹರಿಸೇವೆಗೆ ಬರುವ ಎಲ್ಲರೂ, ಸಾಮಾನ್ಯವಾಗಿ ಹಣ್ಣುಕಾಯಿ ತರುವುದೂ ಮತ್ತು ಕುಟುಂಬದಿಂದ ವಿವಾಹ ಮಾಡಿಕೊಟ್ಟ ಹೆಂಗಸರು ಬರುವಾಗ 'ಎಣ್ಣೆ' ತರುವುದು ಪದ್ಧತಿಯಾಗಿದೆ.

ಹರಿಸೇವೆಯ ದಿನ ಕುಟುಂಬದ ಐನ್‌ಮನೆ, ದೊಡ್ಡಮನೆ, ಮೂಲಮನೆ ಅಥವಾ ಮುಡಿಪು ಕಟ್ಟಿರುವ ಮನೆಯಲ್ಲಿ ದೇವರ ಪೂಜೆಗೋಸ್ಕರ ಭಕ್ತರು ಮನೆಯವರೆಲ್ಲರೂ ಸೇರಿ ದೇವರ ಗುಡಿ 'ಗುಂಡ'ವನ್ನು ಕಟ್ಟಿ ಅಲಂಕರಿಸುವರು. ಕುಟುಂಬದ ಲೆಕ್ಕದಲ್ಲಿ ಒಂದು ಗುಂಡವನ್ನು ಮತ್ತು ಹರಕೆ ಮಾಡಿಕೊಂಡ ಕುಟುಂಬದ ಸದಸ್ಯರು ತಮ್ಮ ಸ್ವಂತ ಖರ್ಚಿನಿಂದ ಗುಂಡಗಳನ್ನು ಕಟ್ಟಿಸುವರು. ಹರಕೆ ಮಾಡಿಕೊಂಡ ಸದಸ್ಯನು ಗುಂಡದ ಖರ್ಚು ಅಲ್ಲದೆ ಸ್ವಲ್ಪಮಟ್ಟಿಗೆ ಊಟೋಪಚಾರದ ಖರ್ಚನ್ನೂ ಕೊಡುವುದು ವಾಡಿಕೆ.

ನಿಶ್ಚಿತ ದಿನದಂದು ಪೂಜೆ ಮಾಡುವುದಕ್ಕೋಸ್ಕರ ಬ್ರಾಹ್ಮಣರನ್ನು ಅಥವಾ ದಾಸರನ್ನು ಕರೆಸಿಕೊಳ್ಳುವರು ಮತ್ತು ದೇವರ ಭಕ್ತ 'ದರ್ಶನಕಾರ'ರನ್ನು ಸಹ ಕರೆಸಿಕೊಳ್ಳುವರು.

ನಂತರ ಭಕ್ತರಿಗೆಲ್ಲ ಫಲಹಾರ ಕೊಡುವರು. ಆದಾದ ನಂತರ ಅವರಿಗೆ ಸ್ನಾನ ಮಾಡಲು ಎಣ್ಣೆ ಕೊಟ್ಟು ಅವರು ಸ್ನಾನ ಮಾಡಿ ಬಂದ ನಂತರ ಅಟ್ಟದಲ್ಲಿ ಕಟ್ಟಿರುವ ಬಾಳೆಗೊನೆ ಮತ್ತು ದೇವರ 'ಮುಡಿಪ'ನ್ನು ಭಂಡಾರವನ್ನು ಕುಟುಂಬದ ಹಿರಿಯನು, ಪಟ್ಟೆದಾರನು, ಕುಟುಂಬದವರು, ಬ್ರಾಹ್ಮಣ ಯಾ ದಾಸರು ಶಂಖ ಜಾಗಟೆಗಳೊಂದಿಗೆ ಹೋಗಿ ಬಿಚ್ಚಿ ತಂದು ಗುಂಡದ ಮುಂದಿಡುವರು.

ಅನಂತರ ಪೂಜೆ ಪ್ರಾರಂಭವಾಗುವುದು. ಬ್ರಾಹ್ಮಣನು ಯಾ ದಾಸನು ವಿಧಿ ಪ್ರಕಾರ ಪೂಜೆ ಮಾಡಿ ದೇವರಿಗೆ ಮಂಗಳಾರತಿ ಮಾಡುವರು. ಇದಕ್ಕೆ 'ಮಹಾಪೂಜೆ' ಎನ್ನುವರು ಆಗ ಗಂಧ, ಧೂಪಾದಿ, ಶಂಖ, ಜಾಗಟೆಗಳನ್ನು ಬಾರಿಸುತ್ತಾ, ನೆರೆದವರೆಲ್ಲರೂ 'ಶ್ರೀ ವೆಂಕಟರಮಣ ದೇವರ ಪಾದಾರವಿಂದಕ್ಕೆ ಗೋವಿಂದಾನ್ ಗೋವಿಂದ, ಗೋವಿಂದ' ಎನ್ನುವರು.

ಆಗ ದರ್ಶನಕಾರರಿಗೆ 'ದರ್ಶನ' ಯಾ ಮೈಮಾನಿಕೆ ಬರುವುದು. ಆಗ ಆತನು ಕುಟುಂಬದಲ್ಲಿರುವ ತಪ್ಪುಗಳನ್ನು ದೋಷಗಳನ್ನು ಮತ್ತು ಆಶುದ್ಧಿಯಾಗಿದ್ದರೆ ಅವುಗಳನ್ನು ಹೇಳಿ ಎಲ್ಲರಿಗೂ ಆಶೀರ್ವದಿಸಿ 'ಒಕ್ಕಣೆ' ಹೇಳುವನು. ಅನಂತರ, ನೆರೆದವರಲ್ಲಿ ಯಾರಾದರೂ ತನ್ನ ಕಷ್ಟ ಪರಿಹರಿಸುವ ಸಲುವಾಗಿ ದರ್ಶನ ಬಂದವನಲ್ಲಿ ಕೇಳಿಸುವರು. ಅದಕ್ಕೆ ಅವನು ಸರಿಯಾದ ಪರಿಹಾರ ಸೂಚಿಸುವನು.

ಅನಂತರ ಪೂಜೆಗೆ ಸೇರಿದವರೆಲ್ಲರೂ ಭಕ್ತಿ ಯಾ ಹರಕೆಯನ್ನು ಭಂಡಾರಕ್ಕೆ ಹಾಕಿ ಪ್ರಸಾದವನ್ನು ಹೊಂದಿಕೊಳ್ಳುವರು. ನಂತರ ಹರಕೆ ಬಿದ್ದ ಹಣವನ್ನು ಲೆಕ್ಕ ನೋಡಿ ಶೇಖರಿಸಿಡುವರು.

ತದನಂತರ ನೆರೆದವರೆಲ್ಲರಿಗೂ ಪ್ರಸಾದ ಅಂದರೆ 'ಅವಲಕ್ಕಿ, ಸಕ್ಕರೆ, ತುಪ್ಪ, ಕಬ್ಬು, ಮಾದ್ರುಳಿ' ಸೇರಿದ ಮಿಶ್ರಣವನ್ನು ಹಂಚುವರು. ಅಲ್ಲದೆ 'ಪಾನಕ' ಬೆಲ್ಲ ಯಾ

ಸಕ್ಕರೆ, ಒಳ್ಳೆ ಮೆಣಸಿನ ಹುಡಿ ಸೇರಿಸಿದ ನೀರು ಕೊಡುವರು. ಅದಾದನಂತರ ಗ್ರಾಮದ ಎಲ್ಲಾ ಮನೆಯವರಿಗೂ, ನೆಂಟರಿಗೂ ಪ್ರಸಾದವೆಂದು ತೆಂಗಿನಗಡಿ, ಬಾಳೆಹಣ್ಣು, ಕುಂಕುಮ, ಪುಷ್ಪಗಳನ್ನು ಕೊಡುವರು.

ತದನಂತರ ಕೆಲವಡೆಗಳಲ್ಲಿ 'ಕೆಂಚಿರಾಯನ' ಪೂಜೆ ನಡೆಸುವರು. ಕೆಂಚಿರಾಯನೆಂದರೆ ವೆಂಕಟರಮಣ ದೇವರ ಧೂತನು. ಆಗ ಗುಂಡಕ್ಕೆ ಬಾಳೆಲೆಯನ್ನು ಮುಚ್ಚಿ ಅಂಗಳದಲ್ಲಿ ಎಡೆ ಹಾಕಲು ಸ್ಥಳ ಶುದ್ಧೀಕರಿಸಿ ಕೋಳಿ, ಆಡು, ಕುರಿಯ ಬಲಿ ಕೊಡುವರು. ಇದಕ್ಕೆ ಕೆಂಚಿರಾಯನಿಗೆ ಬೇಟೆ ಒಪ್ಪಿಸುವುದೆಂದು ಹೆಸರು. ಆಗ ಮೈಮಾನಿಕ ಬರುವ ದರ್ಶನಕಾರರನ್ನು ಸದ್ರಿ ಕ್ರಿಯೆ ಕಾಣಿಸಿದಂತೆ ಒಳಗೆ ಕೋಣೆಯಲ್ಲಿ ಕೂಡಿಸುವರು. ಸಂಪೂರ್ಣ ಪ್ರಾಣಿವಧೆಯಾದ ನಂತರ, ದರ್ಶನಕಾರರನ್ನು ಬಿಡುವರು. ಆಗ ಅವರು ಬಂದು ರಕ್ತದಲ್ಲಿ ಬಿದ್ದು ಹೊರಳಾಡುವರು, ಆಗಲೂ ಅವರಿಗೆ ದರ್ಶನ ಬರುವುದು. ಆಗ ಕೆಲವರು ತಮ್ಮ ತಮ್ಮ ಸಂಕಷ್ಟಗಳನ್ನು ಕೇಳಿಸಿ, ಪರಿಹಾರ ಒದಗಿಸಿಕೊಳ್ಳುವರು.

ಆದಾದ ನಂತರ ಕೋಳಿ, ಆಡು, ಕುರಿಯನ್ನು ಮಾಂಸಮಾಡಿ, ಸಾರುಮಾಡಿ, ಭಕ್ತರು ರೊಟ್ಟಿ ಮಾಡಿ ಎಡೆ ಹಾಕುವರು. ಆಮೇಲೆ ಭಕ್ತರೆಲ್ಲರೂ ಊಟ ಮಾಡುವರು. ಒಡನೆ ನೆರೆದವರೆಲ್ಲರಿಗೂ ಊಟ ಕೊಡುವರು. ಆಮೇಲೆ ಗುಂಡಗಳನ್ನು ಹೊತ್ತುಕೊಂಡು ಹೋಗಿ ಹಾಲು ಬರುವ ಯಾ ಫಲ ಬರುವ ಮರಗಳಡಿಯಲ್ಲಿಡುವರು.

ಅಲ್ಲಿಗೆ ಹರಿಸೇವೆಯ ಕಾರ್ಯಕ್ರಮ ಮುಗಿಯಿತು.

ಹರಿಸೇವೆಯ ಸಂದರ್ಭ ಹರಕೆ ಯಾ ಭಂಡಾರದ ಹಣವನ್ನು ಶೇಕರಿಸಿಟ್ಟು ಅದನ್ನು ತಿರುಪತಿ ಶ್ರೀ ವೆಂಕಟರಮಣ ದೇವರ ಸನ್ನಿಧಿಗೆ ತಲುಪಿಸಲೇಬೇಕು. ಸದ್ರಿ ಹಣವನ್ನು ಕೆಲವರು ಮನಿ ಆರ್ಡರ್ ಮೂಲಕ ಕಳುಹಿಸುವರು. ಇನ್ನು ಕೆಲವೆಡೆ ಕುಟುಂಬದ ಕೆಲವು ವ್ಯಕ್ತಿಗಳು ತಾವೇ ಹೋಗಿ ಅರ್ಪಿಸಿ ಬರುವರು. ಹಾಗೆ ಕುಟುಂಬದ ವ್ಯಕ್ತಿಗಳು ಹೋಗಿ ಹಿಂತಿರುಗಿ ಬಂದ ನಂತರ ಹರಿಸೇವೆ ನಡೆಸಬೇಕೆಂಬ ಪದ್ಧತಿ. ಆದ ಕಾರಣ ಹೆಚ್ಚಿನೆಡೆಗಳಲ್ಲಿ ಹರಿಸೇವೆಗೆ ಮೊದಲು ಗೊನೆ ಕಡಿದ ಒಡನೆ ಹೋಗಿ ಹರಿಸೇವೆಗಿಂತ ಮೊದಲು ಬರುವರು. ಹಾಗೆ ತಿರುಪತಿಗೆ ಹೋಗುವಾಗ ಹೋಗುವವರ ಪೂರ್ತಿ ಖರ್ಚನ್ನು ಭಂಡಾರದ ಹಣದಿಂದಲೇ ಮಾಡಬಹುದೆಂದು ಮತ್ತು ಭಂಡಾರವನ್ನು ಅರ್ಪಿಸಿದ ನಂತರ ಒಂದು ಪೈಸೆಯನ್ನು ಸಹ ಉಳಿಸಿಕೊಳ್ಳಕೂಡದೆಂದು ಹಾಗೂ ಮರಳಿ ಬರುವಾಗ ತಮ್ಮ ಸ್ವಂತ ಖರ್ಚಿನಿಂದಲೇ ಬರುವುದು ವಾಡಿಕೆಯಲ್ಲಿದೆ.

ಚಿತ್ತವಿಲ್ಲದೆ ಗುಡಿಯ ಸುತ್ತಿದೊಡೆ ಫಲವೇನು, ಎತ್ತು ಗಾಣವನು ಹೊತ್ತು ತಾ ನಿತ್ಯದಿ ಸುತ್ತಿ ಬಂದಂತೆ. **–ಸರ್ವಜ್ಞ**

# ಗೌಡರ ಹಬ್ಬಗಳು

**ಯುಗಾದಿ :**

ಯುಗಾದಿ ಹಬ್ಬವು ಹಿಂದೂಗಳಲ್ಲಿ ವರ್ಷದ ಮೊದಲನೆಯ ದಿನದ ಹಬ್ಬ. ಗೌಡರು ಯುಗಾದಿ ಹಬ್ಬವನ್ನು ಬಹು ಸಂಭ್ರಮದಿಂದ ಆಚರಿಸುತ್ತಾರೆ.

ಯುಗಾದಿ ಹಬ್ಬದ ದಿನ ಬೆಳಗ್ಗೆ ತಮ್ಮ ಮನೆಗಳನ್ನು ಶುಚಿಗೊಳಿಸಿ ರಂಗೋಲಿ ಹಾಕಿ ಮಾವಿನ ಎಲೆಯ ತೋರಣಗಳಿಂದ ಅಲಂಕರಿಸಿ ಸ್ನಾನಮಾಡಿ ಹೊಸ ಬಟ್ಟೆಗಳನ್ನು ಧರಿಸಿ, ಕುಲದೈವವನ್ನು ಪ್ರಾರ್ಥಿಸಿ, ಪೂಜಿಸಿ ಹಣ್ಣುಕಾಯಿ ಗಂಧ ಮುಂತಾದ ಪ್ರಸಾದವನ್ನು ಸ್ವೀಕರಿಸಿದ ನಂತರ ಬೇವು ಬೆಲ್ಲವನ್ನು ತಿನ್ನುವರು.

ಹೊಸ ವರ್ಷದಲ್ಲಿ ಸುಖ ದುಃಖ, ಸಿಹಿ ಕಹಿಯು ಸಮ್ಮಿಶ್ರವಾಗಿ ಬರಲೆಂಬ ಭಾವನೆಯಿಂದ ಬೇವು ಬೆಲ್ಲವನ್ನು ಸೇವಿಸುತ್ತಾರೆ.

ಕುಟುಂಬದವರೆಲ್ಲರೂ ಸೇರಿ ಏಕಮನಸ್ಸಿನಿಂದ ಒಂದೇ ಸಭೆಯಲ್ಲಿ ಕುಳಿತು ಭೋಜನ ಮಾಡುವರು. ಆ ದಿನ ಯಾರೂ ಮದ್ಯ, ಮಾಂಸವನ್ನು ಸೇವಿಸುವುದಿಲ್ಲ. ಹೆಚ್ಚಾಗಿ ತಾವೇ ಬೆಳೆಸಿದ ಹೊಸ ತರಕಾರಿ ಕಾಯಿ ಪಲ್ಯಗಳನ್ನೇ ಸೇವಿಸುವರು.

ಯುಗಾದಿಯ ದಿನದಂದು ಕುಟುಂಬದ ಹಿರಿಯರು ಹೊಸ ವರ್ಷದ ಫಲ, ಆಯ ವ್ಯಯ, ಜಯಾಪಜಯ, ಭವಿಷ್ಯವನ್ನು ಹೊಸ ಪಂಚಾಂಗದಿಂದ ನೋಡಿ ಕುಟುಂಬದವರೆಲ್ಲರಿಗೂ ತಿಳಿಯ ಹೇಳುವರು.

ನಂತರ ಊರಿನ ಜನರೆಲ್ಲ ಒಂದೆಡೆ ದೇವಸ್ಥಾನದಲ್ಲಿ ಸೇರಿ ಪೂಜೆ ಸಲ್ಲಿಸಿ ತೆಂಗಿನ ಕಾಯಿಗೆ ಕಲ್ಲು ಹೊಡೆಯುವುದು, ತೆಂಗಿನಕಾಯಿಗೆ ಕೋವಿಯಿಂದ ಗುಂಡು ಹೊಡೆಯುವುದು, ಆಟೋಟಗಳ ಸ್ಪರ್ಧೆ, ಸಭೆ ಬಹುಮಾನ ವಿತರಣೆಗಳನ್ನು ಬಹಳ ಉತ್ಸಾಹದಿಂದ ಪ್ರತೀ ವರ್ಷವೂ ಆಚರಿಸುವರು.

**ಬಿಶು ಸಂಕ್ರಮಣ:**

ಗೌಡ ಎಂದರೆ ಭೂಮಿಗೆ ಒಡೆಯ, ನೇಗಿಲಯೋಗಿ, ವಕ್ಕಲುತನ ಮಾಡುವವರು ಎಂದ ಮೇಲೆ ಪ್ರತಿಯೊಬ್ಬರಿಗೂ ಉಳುವ ಸಮಯ ನಿರೀಕ್ಷಣೆ ಹುರುಪಿನಿಂದ ಉಳುವುದಕ್ಕೆ ಪ್ರಾರಂಭಿಸುವುದು. ಬಿಶು ಸಂಕ್ರಮಣದ ದಿನದಂದು ಗೌಡರು ಅವರ ಕುಟುಂಬದ ಮನೆಗಳಲ್ಲಿ ಬೆಳಗ್ಗಿನ ಜಾವದಲ್ಲಿ ಮನೆಯನ್ನು ಶುಚಿಯಾಗಿರಿಸಿ, ಮನೆಯ ಯಜಮಾನ ಭಕ್ತಿಯಿಂದ ಮಣೆಯ ಮೇಲೆ ಮಡಿಯಾದ ಬಿಳಿ ಬಟ್ಟೆಯನ್ನು ಹಾಸಿ ನೆಲ್ಲಕ್ಕಿಯಲ್ಲಿ ದೀಪಿಗೆ ಇದ್ದು ಹಾಸಿದ ಮಡಿಯಲ್ಲಿ ಹೊಂಬೆಳಕನ್ನು ಹತ್ತಿಸಿ ಇಡುತ್ತಾರೆ. ಇದರೊಡನೆ ಒಂದು ಬಾಳೆಲೆಯಲ್ಲಿ ಅಕ್ಕಿ, ಹಣ್ಣು, ಕಾಯಿ, ಎಲೆ, ಅಡಿಕೆ, ಹೂಗಳಿಂದ ಶ್ರೀ ಗಣಪತಿಗೆ

ಇಡುವರು. ಇನ್ನೊಂದು ಬಾಳೆಲೆಯಲ್ಲಿ ಬೆಳ್ಳಿ ನಾಣ್ಯಗಳು, ಸ್ವರ್ಣ, ಗಂಧದ ಕಡ್ಡಿ ಇತ್ಯಾದಿಗಳಿಂದ ಅಲಂಕರಿಸಿ ಪೂಜಿಸುವರು. ನಂತರ ಕುಟುಂಬದ ಸರ್ವರೂ ದೇವರನ್ನು ಪ್ರಾರ್ಥಿಸಿ ಅಕ್ಕಿ ಹಾಕಿ ಕೈ ಮುಗಿದು ತಮ್ಮ ಕೆಲಸ ಕಾರ್ಯಗಳನ್ನು ಪ್ರಾರಂಭಿಸುವರು. ಇದಕ್ಕೆ 'ಖಣಿ ಪೂಜೆ' ಯಾ ಖಣೆಗೆ ಇಡುವುದೆಂದು ಹೆಸರು.

ನಂತರ ನೇಗಿಲು, ನೊಗ ಎತ್ತುಗಳನ್ನು ಗದ್ದೆಗೆ ಕೊಂಡು ಹೋಗಿ ಅಲ್ಲಿ ಶಾಸ್ತ್ರೋಕ್ತವಾಗಿ ಕೊಡಿ ಬಾಳೆಲೆಯಲ್ಲಿ ಶ್ರೀ ಗಣಪತಿಗೆ ಹಣ್ಣು, ತೆಂಗಿನಕಾಯಿ, ಎಲೆ ಅಡಿಕೆ, ಹಣ ಇವುಗಳನ್ನಿಟ್ಟು, ಇನ್ನೊಂದು ತುದಿ ಬಾಳೆಲೆಯಲ್ಲಿ ಸಿಹಿಯಾದ ಹಿಟ್ಟು (ಉಂಣೆಕ್ಕಿ ಕಜ್ಜಾಯ) ಹೂವು ಇಟ್ಟು , ಹಣ್ಣು ಕಾಯಿ ಒಡೆದು ಪೂಜೆ ಮಾಡಿ ಗಂದದೂಪಗಳಿಂದ ಎತ್ತುಗಳನ್ನು ಪೂಜಿಸಿ ತಾವು ಗಂಧಾಕ್ಷತೆಗಳನ್ನಿಟ್ಟುಕೊಂಡು ಎತ್ತುಗಳಿಗೂ ಹಚ್ಚುವರು. ದೇವರನ್ನು ಪ್ರಾರ್ಥಿಸಿ ಎತ್ತುಗಳ ತಲೆಗೆ ಅಕ್ಕಿ ಹಾಕಿ ನೊಗ ಇಟ್ಟು ನೇಗಿಲು ಕಟ್ಟಿ ಹೂಡುತ್ತಾರೆ.

ಒಂದು 'ಹೋಳಿ' ಎಂದರೆ ಎರಡು ಅಂಕವಾಗಿ ನಾಲ್ಕೈದು ಸುತ್ತು ಕಿರಿದಾಗಿ ಉಳುವರು. ಉತ್ತ ಜಾಗಕ್ಕೆ ಗೊಬ್ಬರ, ಹಸಿರು ಸೊಪ್ಪು (ನೇರಳೆ, ಹೊಲುವೆ) ತಂದು ಹಾಕುತ್ತಾರೆ. ಉಳುವವರು ನೆಕ್ಕಿ ಗಿಡದ ಕೋಲನ್ನು ಹಿಡಿದೇ ಉಳುವರು. ಅಂದಿನಿಂದ ಎಲ್ಲರೂ ಪ್ರತಿದಿನ ಉಳಲು ಪ್ರಾರಂಭಿಸುವರು. ಆ ದಿನ ದೇವಸ್ಥಾನಗಳಲ್ಲಿ ಪೂಜೆ ಪುರಸ್ಕಾರ ಇತ್ಯಾದಿ ಪುಣ್ಯ ಕಾರ್ಯಗಳನ್ನು ಮಾಡುವರು.

**ಕೈಲ್ ಮುಹೂರ್ತ :**

ಕೈಲ್ ಮುಹೂರ್ತ ಹಬ್ಬವು ಕೊಡಗಿನಲ್ಲಿ ಮಾತ್ರ ಆಚರಿಸುವ ಹಬ್ಬವಾಗಿದೆ. ಕೈಲ್ ಮುಹೂರ್ತ ಹಬ್ಬವನ್ನು ಸಾಮಾನ್ಯವಾಗಿ ಸೆಪ್ಟಂಬರ್ 3 ರಂದು ಪ್ರತಿ ವರ್ಷವೂ ಆಚರಿಸುವರು.

ಆ ದಿನ ಕೊಡಗಿನಾದ್ಯಂತ ಭೂ ವ್ಯವಸಾಯ ಮಾಡುವವರೆಲ್ಲರೂ ತಮ್ಮ ಭತ್ತದ ವ್ಯವಸಾಯ (ಅಗೆ, ನಾಟಿ) ಮುಗಿಸಿ ತಮ್ಮ ಆಯುಧ (ನೇಗಿಲು ನೊಗ)ಗಳನ್ನು ಶುಚಿಗೊಳಿಸಿ ಅವುಗಳನ್ನು ಪೂಜಿಸುತ್ತಾರೆ. ಕೈಲ್ ಮುಹೂರ್ತ ಎಂದರೆ ವ್ಯವಸಾಯ ಉಪಕರಣಗಳ ಆಯುಧ ಪೂಜೆ ಮತ್ತು ವಿಶ್ರಾಂತಿ ದಿನವೆಂದು ಸಾಧಾರಣ ತಿಳುವಳಿಕೆಯಾಗಿದೆ. ಅಂದು ಪ್ರತಿ ಮನೆಯಲ್ಲೂ ವಿಶೇಷ ರೀತಿಯ ಭೋಜನ ಏರ್ಪಡಿಸುವರು.

ಆ ದಿನ ಊರಿನವರೆಲ್ಲರೂ ಸೇರಿ ಸಾರ್ವಜನಿಕ ಸ್ಥಳಗಳಲ್ಲಿ ಆಟೋಟಗಳ ಸ್ಪರ್ಧೆ, ತೆಂಗಿನಕಾಯಿಗೆ ಗುಂಡು ಹೊಡೆಯುವುದು ಇತ್ಯಾದಿ ಸ್ಪರ್ಧೆಗಳನ್ನು ಏರ್ಪಡಿಸಿ ಸಭೆ ಸೇರಿ ಬಹುಮಾನಗಳನ್ನು ವಿತರಿಸುವರು.

**ಕಾವೇರಿ ಸಂಕ್ರಮಣ :**

ಶ್ರೀ ಮೂಲ ಕಾವೇರಮ್ಮನ ಪವಿತ್ರ ತೀರ್ಥೋದ್ಭವವು ತುಲಾ ಸಂಕ್ರಮಣದಂದು ಅಕ್ಟೋಬರ್ ತಿಂಗಳ 16, 17ರಂದು ಬರುವುದು. ಇದನ್ನು ಕೊಡಗಿನಾದ್ಯಂತ ಹಬ್ಬವೆಂದು ಆಚರಿಸುವರು. ಒಂದು ಕುಟುಂಬದಲ್ಲಿ ಒಬ್ಬನಾದರೂ ಶ್ರೀ ಕಾವೇರಿ ಉದ್ಭವ ಸ್ಥಾನ ಭಾಗಮಂಡಲ, ತಲಕಾವೇರಿಗೆ ಹೋಗಿ ಮಿಂದು ಪುಣ್ಯ ತೀರ್ಥವನ್ನು ತರುತ್ತಾರೆ.

ಮನೆಯಲ್ಲಿ ಹಿರಿಯರು ಸತ್ತರೆ ದೀಕ್ಷೆ ನಿಂತವರು, ಹೆಂಡತಿ ಸತ್ತರೆ ಗಂಡನು, ತಂದೆ ಸತ್ತರೆ ಮಕ್ಕಳೂ ಭಾಗಮಂಡಲಕ್ಕೆ ಹೋಗಿ ಪುಣ್ಯಸ್ನಾನ ಮಾಡಿ ಸತ್ತವರಿಗೆ ಪಿಂಡ ಹಾಕಿ ತೀರ್ಥ ಪ್ರಸಾದವನ್ನು ಮನೆಗೆ ತಂದು ಮನೆಯವರಿಗೂ, ನೆರೆಯವರಿಗೂ ಹಂಚುವುದು ವಾಡಿಕೆ.

ಮನೆಗೆ ತೀರ್ಥವನ್ನು ತರುವುದಕ್ಕೆ ಹಿಂದಿನ ದಿನ ಗದ್ದೆ, ತೋಟಗಳನ್ನು ಶೃಂಗರಿಸುವುದಕ್ಕಾಗಿ ಬೆತ್ತು ಎಂಬ ಮರದ ಕೋಲನ್ನು ಎಲ್ಲಾ ಗದ್ದೆಗಳಿಗೂ ಬೆತ್ತು ನೆಟ್ಟು ಬೆತ್ತ್ ಬಳ್ಳಿ (ನೋಕಟೆ) ಎಂಬ ಬಳ್ಳಿಯ ಎಲೆಯಿಂದ ಅಲಂಕರಿಸುತ್ತಾರೆ. ಕುಟುಂಬದ ಪಕಲಿನಲ್ಲಿ ಒಂದು ಬೆತ್ತಿನ ಕೋಲಿನ ಗುಂಪನ್ನು ನೆಟ್ಟು ಅಲ್ಲಿ ತುಂಬಾ ಬೆತ್ತಿನ ಎಲೆಗಳಿಂದ ಶೃಂಗರಿಸಿ ಮನೆಯಲ್ಲಿ ತೀರ್ಥೋದ್ಭವವಾಗುವ ದಿನ ತಯಾರಿಸಿದ ತಿಂಡಿ ತಿನಿಸುಗಳನ್ನು ಬೆತ್ತಿನಿಂದ ಅಲಂಕೃತವಾದ ಕೋಲುಗಳನ್ನು ನೆಟ್ಟದರ ಮೇಲೆ ಬಾಳೆಲೆ ಹಾಸಿ, ದೀಪ ಹತ್ತಿಸಿ, ಗಂಧದ ಕಡ್ಡಿ ಹತ್ತಿಸಿ ನೈವೇದ್ಯವನ್ನಿಟ್ಟು ಶ್ರೀ ಕಾವೇರಮ್ಮನನ್ನು ನೆನೆದು ಜೋರಾಗಿ 'ಪಾಂಡವರು ಕೌರವರು ಕೂ' ಎಂದು ಮೂರು ಬಾರಿ ಕೂಗಿ ಹೇಳುತ್ತಾರೆ. ಶ್ರೀ ಕಾವೇರಿ ತೀರ್ಥವನ್ನು ಮನೆಗೆ ತರುವಾಗ ಎಲ್ಲರೂ ಸ್ನಾನ ಮಾಡಿ ಶುಭ್ರವಾದ ಬಟ್ಟೆಗಳನ್ನು ಧರಿಸಿ ತೀರ್ಥ ಸ್ವೀಕರಿಸುವರು. ಆ ದಿನ ತಾವು ತಯಾರಿಸಿದ ಭಕ್ಷ್ಯಗಳನ್ನು ಬಂದವರಿಗೆಲ್ಲರಿಗೂ ಕೊಡವುದು ರೂಢಿಯಲ್ಲಿದೆ.

**ದೀಪಾವಳಿ ಹಬ್ಬ ಮತ್ತು ಬಲೀಂದ್ರ ಪೂಜೆ :**

ಈ ಹಬ್ಬವನ್ನು ಸಾಧಾರಣವಾಗಿ ಕೊಡಗಿನ ಕೆಲವು ಭಾಗಗಳಲ್ಲಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಚರಣೆ ಮಾಡುತ್ತಾರೆ. ಈ ಹಬ್ಬವು ಕಾವೇರಿ ಜಾತ್ರೆ 'ತಿರ್ಥೋದ್ಭವ ಕಳೆದು ಪ್ರಥಮವಾಗಿ ಬರುವ ಅಮವಾಸ್ಯೆ ದಿನ ಪ್ರಾರಂಭವಾಗುವುದು. ಅಂದರೆ ಬೊಂತೆಲ್ (ತುಲಾ) ತಿಂಗಳಲ್ಲಿ ಈ ಹಬ್ಬ ಬರುವುದು.

ಮನೆಯ ಯಜಮಾನರು ಬೆಳಗ್ಗೆ ಫಲಹಾರದ ನಂತರ ಹೋಗಿ ಎರಡೂ ಯಾ ಒಂದು ಹಾಲೆ ಮರದ 4 ಕವಚ ಮತ್ತು ಸೊಪ್ಪು ಉಳ್ಳ ಕಂಬಗಳನ್ನು ತಂದು ಮನೆಯ ಮುಂಭಾಗ ಅಂಗಳದಲ್ಲಿ ನೆಡುವರು. ನಂತರ ಆ ಕಂಬಕ್ಕೆ ಹೂಮಾಲೆ, ಭತ್ತದ ತೆನೆ, ಎಲೆ, ಅಡಿಕೆ ಹಿಂಗಾರಗಳಿಂದ ಶೃಂಗರಿಸಿ ಈ ಕಂಬಗಳನ್ನು ಹೆಣ್ಣು ಗಂಡು ಎಂದು ಸಂಕಲ್ಪಿಸುವರು.

ಸಾಯಂಕಾಲದ ಸಮಯ ಈ ಕಂಬಗಳ ಮುಂಭಾಗ ಸಗಣಿಯಿಂದ ಸ್ವಚ್ಛಗೊಳಿಸಿ ತಂದು ಮೇಲೆ ಇಟ್ಟು ನಂತರ ಪ್ರಥಮ ದಿನ ಅವಲಕ್ಕಿ, ಬಾಳೆಹಣ್ಣು, ತೆಂಗಿನಕಾಯಿ ಬಳಸಿ ಕಂಬಗಳ ಮೇಲೆ ದೀಪ ಹಚ್ಚಿಟ್ಟು ಬಾಳೆಲೆಯ ತುದಿಯಲ್ಲಿ ಒಂದು ಬತ್ತಿ ಕತ್ತಿಸಿ ಇಡುವರು. ನಂತರ ಬೆತ್ತಿಗೆ ಅಕ್ಕಿ ಹಿಡಿದು ಮನೆ ಯಜಮಾನರು ಮಕ್ಕಳು 'ಬಲಿಯೇಂದ್ರ, ಬಲಿಯೇಂದ್ರ, ಹರಿಯೇ ಹರಿ, ಕೂ' ಎಂದು ಅಕ್ಕಿ ಹಾಕುತ್ತಾ ಮೂರು ಸರ್ತಿ ಕೂಗಿ ಹೇಳಿ ಕೈ ಮುಗಿದು ಮನೆಗೆ ಬರುತ್ತಾರೆ. ಆ ಸಂದರ್ಭದಲ್ಲಿ ಮನೆಯ ಸುತ್ತಲೂ ದೀಪಗಳನ್ನು ಹಚ್ಚಿಟ್ಟಿರುವರು. ಮಕ್ಕಳು ಪಟಾಕಿಗಳನ್ನು ಹೊಡೆಸುವರು.

ಕೆಲವು ಕಡೆಗಳಲ್ಲಿ ನೊರೊಂದು ದೀಪ ಯಾ ಬತ್ತಿಗಳನ್ನು ಕತ್ತಿಸಿಟ್ಟು ತುಳು 'ಪಾಡ್ದನ' ಹೇಳುವರು 'ಪಾಡ್ದನ' ಸಂಪೂರ್ಣ ಹೇಳಿ ಮುಗಿಯುವ ಕೊನೆಯಲ್ಲಿ ಕಂಬ ಗಡ ಗಡ ನಡುಕ ಬರುವುದೆಂದು ಹಿರಿಯರ ನಾಣ್ನುಡಿ ಇದೆ. ಇದು ವಾಮನ ಅವತಾರಿ ಭಗವಂತನು ಬಲಿಯೇಂದ್ರ ರಾಜನನ್ನು ಮೂರು ಅಡಿ ಜಾಗ ದಾನ ಕೇಳಿ ಬಲಿಯೇಂದ್ರನನ್ನು ಮೋಸಗೊಳಿಸಿ, ಭಗವಂತನು ಧರ್ಮ ರಕ್ಷಣೆ ಮಾಡಿದ ಪುರಾಣ ಕಥೆಗಳ ಆಧಾರದ ಮೇಲೆ ಕಲಿಯುಗದಲ್ಲಿ ಸಹ ನಿನ್ನನ್ನು ಕೊಂಡಾಡಲಿ ಎಂದು ಹರಿಯು ಬಲಿಯೇಂದ್ರನಿಗೆ ವರನಿತ್ತನಂತೆ. ಆದ ಕಾರಣ ಈಗಲೂ ಈ ಹಬ್ಬವನ್ನು ಗೌಡರು ಆಚರಿಸುತ್ತಾ ಬರುತ್ತಾರೆ. ಬಲಿಯೇಂದ್ರನೆಂಬ ಗ್ರಹಿಕೆಯನ್ನು ಕಂಬಗಳಲ್ಲಿ ನಂಬಿಗೆ ಇಡುವರು 1 ಕಂಬ ರಾಜ, 1 ಕಂಬ ರಾಣಿ ಎಂದು ಸಂಕಲ್ಪಿಸಿಕೊಳ್ಳುತ್ತಾರೆ.

ಅವಲಕ್ಕಿ, ಬಾಳೆಹಣ್ಣು, ತೆಂಗಿನಕಾಯಿಯನ್ನು ಸ್ವಲ್ಪ ಸಮಯ ಕಳೆದು ತೆಗೆದು ಬೇರೆ ಅವಲಕ್ಕಿ ಸಹ ಸೇರಿಸಿ ಅದರ ಪಾಕ ಗೈದು ಸತ್ತವರಿಗೆ ಇಡುವ ಕ್ರಮ ಮಾಡುತ್ತಾರೆ. ಇದಕ್ಕೆ 'ಅವಲು ಹಾಕುವುದು' ಎನ್ನುವರು. ಸತ್ತವರು ಹೆಣ್ಣು ಜನರಾದರೆ ಅಮವಾಸ್ಯೆ ದಿನ ಬೆಳಗ್ಗೆಯೂ, ಗಂಡು ಜನರಾದರೆ ಪಾಡ್ಯ ದಿನ ಅವಲು ಹಾಕುವ ಸಂಪ್ರದಾಯವಿದೆ.

ಈ ಕ್ರಮಕ್ಕೆ ಊರಿನವರು, ಬಳಗದವರು, ನೆಂಟರು ಅವಲಕ್ಕಿ, ತೆಂಗಿನಕಾಯಿ, ಬೆಲ್ಲ, ಬಾಳೆಹಣ್ಣು ತೆಗೆದುಕೊಂಡು ಹೋಗಿ ಅಗಲಿಗೆ ಸ್ವಲ್ಪ ಹಾಕಿ ಕೈ ಮುಗಿದು ಊಟ ಮಾಡಿ ಹಿಂತಿರುಗುವರು.

ಮರುದಿನ ಸಹ ಮನೆಯವರು ಮಡಿ ಉಟ್ಟು ಶುಭ್ರತೆಯಿಂದ ಧನಧಾನ್ಯ ಪೂಜೆ ಮಾಡುವರು. ಆ ದಿನ ಬಲಿಯೇಂದ್ರ ಕಂಬಕ್ಕೆ ರಾತ್ರಿ ಬೆಳಿಗ್ಗೆ ಅಕ್ಕಿ, ಸೌತೆಕಾಯಿ, ಕಾಯಿ ಇಟ್ಟು ದೀಪ ಹಚ್ಚಿಟ್ಟು ಮೊದಲನೆ ದಿನ ಹೇಳಿದಂತೆ ಹೇಳುವರು.

ಇದು ಮೂರು ದಿನ ರಾತ್ರಿ ಆಚರಿಸಿ ನಾಲ್ಕನೇ ದಿನ ಪ್ರಾತಃಕಾಲ ಕಂಬಗಳನ್ನು ಕಿತ್ತು ಮರದ ಬುಡದಲ್ಲಿ ಯಾ ನೀರು ಇರುವ ಸ್ಥಳಗಳಲ್ಲಿ ಕೊಂಡು ಹೋಗಿ ಇಡುವರು. 3ನೇ ದಿನ ಬೆಳಗ್ಗೆ ಲಕ್ಷ್ಮಿ ಪೂಜೆ, ಗೋಪೂಜೆ ಮಾಡುವರು. ಗೋಪೂಜೆ ದಿನ ಗೋವುಗಳನ್ನು ಸ್ನಾನ ಮಾಡಿಸಿ ಮೈ ತೊಳೆದು ಗಂಧದ ತಿಲಕ ಹಚ್ಚಿ, ಹೂಮಾಲೆ ಹಾಕಿ ದನಗಳ ಕೊಟ್ಟಿಗೆ ಮುಂಭಾಗ ದೀಪ ಹಚ್ಚಿಟ್ಟು ಮನೆಯಲ್ಲಿ ಮಾಡಿದ ಭಕ್ಷ್ಯ ಭೋಜನಗಳನ್ನು ಗೋವುಗಳಿಗೆ ಕೊಡುವರು. ಅಮವಾಸ್ಯೆ, ಪಾಡ್ಯ, ಬಿದಿಗೆ ಈ ಮೂರು ದಿವಸಗಳ ಸರ್ವ ಸಾಧಾರಣ ಎಲ್ಲರ ಮನೆಯಲ್ಲಿ ವಿಶೇಷ ಅಡುಗೆ ಆಡಂಬರ ಮಾಡುವುದಲ್ಲದೆ ಜೀಗರನ್ನು ಕರೆಯಸಿಕೊಂಡು ಹಬ್ಬವನ್ನು ಆಚರಿಸಿ ಸಂತೋಷಪಡುವರು. ಮಕ್ಕಳು ಪಟಾಕಿ ಮಳೆ ಸುರಿಸುವರು. ಹೊಸ ಬಟ್ಟೆ ಧರಿಸುವರು. ಬಲಿರಾಯನ ಕಾಲದಲ್ಲಿ ಬರಗಾಲವಿರಲ್ಲವೆಂತಲೂ ಎಲ್ಲರೂ ಸುಭಿಕ್ಷದಿಂದ ಜೀವನ ಮಾಡುತ್ತಿದ್ದರೆಂದು ವಾಡಿಕೆ.

**ಹುತ್ತರಿ ಹಬ್ಬ :**

ಹುತ್ತರಿ ಹಬ್ಬ ಕೊಡಗಿನಲ್ಲಿ ಆಚರಿಸುವ ಸಂಭ್ರಮದ ಹಬ್ಬ. ಇದು ಹೊಸ ಭತ್ತವನ್ನು ಮನೆಗೆ ತೆಗೆದುಕೊಂಡು ಬರುವ ಸಮಯದಲ್ಲಿ ಆಚರಿಸುವ ಹಬ್ಬ. ಹುತ್ತರಿ ಹಬ್ಬ ಕಳೆದ ನಂತರವೇ ಭತ್ತದ ಬೆಳೆ ಕೊಯಿದು ಮನೆಗೆ ತರಬೇಕೆಂಬ ರೂಢಿ ಮತ್ತು ಹೊಸ ಅಕ್ಕಿ ಊಟ ಮಾಡಬಹುದೆಂದು ಪದ್ಧತಿಯಲ್ಲಿರುವುದು.

ಹುತ್ತರಿ ಹಬ್ಬದ ಪ್ರಯುಕ್ತ ಪ್ರತಿಯೊಬ್ಬರೂ ಮನೆಯನ್ನು ಸಾರಿಸಿ, ಸುಣ್ಣವನ್ನು ಹೊಡೆದು, ಮನೆಯ ಅಂಗಳ ಓಡಾಡುವ ದಾರಿ, ಭತ್ತದ ಕಳ, ಮುಂತಾದವುಗಳನ್ನು ಶುಚಿಗೊಳಿಸಿ, ಅಂಗಳ ಕಣಕ್ಕೆ ಸಗಣಿ, ರಂಗೋಲೆ ಬರೆದು ಶೃಂಗರಿಸುತ್ತಾರೆ. ಮನೆಯನ್ನು ತಳಿರು ತೋರಣ, ಕಣಕ್ಕೆ ಸಗಣಿ ಸಾರಿಸಿ, ರಂಗೋಲೆ ಬರೆದು ಶೃಂಗರಿಸುತ್ತಾರೆ. ಮನೆಯನ್ನು ತಳಿರು ತೋರಣ, ಚೆಂಡು ಹೂವಿನಿಂದ ಅಲಂಕರಿಸುತ್ತಾರೆ. ಆಯಾ

ಕುಟುಂಬದ ಐನ್ ಮನೆಯಲ್ಲಿ ಸಾಯಂಕಾಲ ಎಲ್ಲರೂ ಸೇರಿ ಫಲಹಾರ (ತಂಬಿಟ್ಟು, ಅವಲಕ್ಕಿ) ಮಾಡಿ ಅರಳಿ, ಕುಂಬಳಿ, ಹಲಸು, ಕಾಡುಗೇರು, ಮಾವು ಮರದ ಎಲೆಗಳನ್ನು ಒಂದರ ಮೇಲೊಂದಿಟ್ಟು ಸುರುಳಿ ಮಾಡಿಡುವರು. ಇದಕ್ಕೆ 'ನೆರೆ, ಎಂದು ಹೆಸರು. ಅನಂತರ ಊರಿನ ದೇವಸ್ಥಾನಕ್ಕೆ ಹೋಗಿ ಅಲ್ಲಿ ಕದಿರು ಕೊಯಿದು ತರುತ್ತಾರೆ. ಆ ಮೇಲೆ ಮನೆಯ ಯಜಮಾನನು ಕದಿರುಗುತ್ತಿ ಎಂಬ ಬಿದಿರಿನ ಗುತ್ತಿಯನ್ನು ಅಥವಾ ಚೆಂಬನ್ನು ತೆಗೆದು ಮನೆಯವರೆಲ್ಲರೂ ಸೇರಿ ದೇವರನ್ನು ಪ್ರಾರ್ಥಿಸಿ ನೆಲ್ಲಕ್ಕಿಗೆ ಅಕ್ಕಿ ಹಾಕಿ ಕೈ ಮುಗಿದು ಗದ್ದೆಗೆ ಎಲ್ಲರೂ ಹೋಗುವರು. ಕದಿರು ಕೊಯ್ಯಲು ಹೋಗುವ ಸಂದರ್ಭದಲ್ಲಿ ಕಿರಿಯರು ಹಿರಿಯ ಕಾಲು ಹಿಡಿದು ಆಶೀರ್ವಾದ ಪಡೆದು ಹೊರಡುವರು. ಆಗ ಹೆಚ್ಚಿನವರೆಲ್ಲರೂ ಪಟಾಕಿಗಳನ್ನು ಹೊಡೆಸುತ್ತಾ 'ಪೊಲಿ ಪೊಲಿಯೇ ಬಾ' ಎಂದು ಜೋರಾಗಿ ಕೂಗುತ್ತಾ ಕದಿರು ಕೊಯ್ಯುವ ಗದ್ದೆಗೆ ಹೋಗುವರು. ಗದ್ದೆಗೆ ಹೋಗಿ ಅಲ್ಲಿ ಗದ್ದೆಯಲ್ಲಿನ 3/5 ಸುಲಿಗಳನ್ನು ಒಟ್ಟು ಗೂಡಿಸಿ ನೆರೆಕಟ್ಟಿ, ಅವುಗಳಿಗೆ ಕದಿರುಗುತ್ತಿಯಲ್ಲಿ ಸ್ವಲ್ಪ ಹಾಲನ್ನು ಹೊಯ್ದು ಅರ್ಧದಿಂದ ಮೇಲಿನ ಕದಿರುಗಳನ್ನು ಮಾತ್ರ ಕೊಯ್ಯುವರು. ನಂತರ ಮನೆಯವರೆಲ್ಲರೂ ಬೇಕಾಗುವಷ್ಟು ಕದಿರುಗಳನ್ನು ಕೊಯ್ದುಕೊಳ್ಳುವರು. ಆಗ ಕೋವಿಯಿಂದ ಗುಂಡನ್ನು ಆಕಾಶಕ್ಕೆ ಹೊಡೆಯುವರು. ಪಟಾಕಿಗಳನ್ನು ಹೊಡೆಸುವರು, 'ಪೊಲಿ, ಪೊಲಿಯೇ ಬಾ' ಎಂದೆಲ್ಲರೂ ಕೂಗುವರು. ಅನಂತರ ಕದಿರನ್ನು ತೆಗೆದುಕೊಂಡು ಮನೆಗೆ ಬರುವಾಗ ಭತ್ತದ ಕಣದಲ್ಲಿರುವ ಬೇಟಿ ಕಂಬಕ್ಕೆ ಸುತ್ತು ಬಂದು, ಮನೆಗೆ ಬಂದು ನೆಲ್ಲಕ್ಕಿ ದೀವಿಗೆಯಡಿಯಲ್ಲಿಡುವರು. ನಂತರ ಎಲ್ಲರೂ ಕದಿರನ್ನು ಸೇರಿಸಿ ನೆರೆ ಕಟ್ಟಿ, ದೇವರ ದೀಪಕ್ಕೆ ಪಾಯಸದ ಮಡಿಕೆಗೆ, ಅಟ್ಟಕ್ಕೆ, ಏಣಿ ಮೆಟ್ಟಲಿಗೆ, ಮನೆ ಕಂಬಗಳಿಗೆ, ಮನೆಯ ಎದುರಿನ ಕೌಕೋಲುಗಳಿಗೆ, ಹಟ್ಟಿಗೆ, ಕಳದ ಬೇಟಿ ಕಂಬಕ್ಕೆ ನೆರೆ ಕಟ್ಟುವರು ಮತ್ತು ಕದಿರಿನ ಭತ್ತವನ್ನು ತೆಗೆದು ದೇವರ ದೀಪಕ್ಕೆ ಹಾಕಿ ಕೈ ಮುಗಿಯುವರು. ಅನಂತರ ಪಾಯಸಕ್ಕೆ ಕದಿರಿನ ಭತ್ತವನ್ನು ಸುಲಿದು ಹಾಕುವರು. ಈ ಹಬ್ಬಕ್ಕೆ 'ಹುತ್ತರಿ ಗೆಣಸು'ವಿನ ಸಾರು ಮಾಡುವರು. ನಂತರ ಮನೆಯವರೆಲ್ಲರೂ ಕುಳಿತು ಊಟ ಮಾಡುವರು. ಅನಂತರ ತೆರೆದವರೆಲ್ಲರೂ ಅವರವರ ಮನೆಗೆ ಕದಿರು ತೆಗೆದುಕೊಂಡು ಹೋಗಿ ನೆರೆ ಕಟ್ಟುವರು. ಹುತ್ತರಿ ಕಳೆದ ದಿನದಿಂದ ಮೂರು, ಐದು, ಏಳು ದಿನಗಳವರೆಗೆ ಗ್ರಾಮದಲ್ಲಿ ಮನರಂಜನೆಯ ಮೇಳಗಳ ಮತ್ತು 'ಊರರ್‌ಮೆ' ಎಂಬ ಕಂಬಳದ ಊಟವನ್ನು ಊರವರೆಲ್ಲರೂ ಸೇರಿ ನೆರವೇರಿಸುತ್ತಾರೆ.

ಕಿಡ್ಡಾಸ ಹಬ್ಬ :

ಒಕ್ಕಲು ಆದ ನಂತರ ಭತ್ತವನ್ನು ಪೂಜಿಸುವ ಹಬ್ಬ, ಕಿಡ್ಡಾಸ ಹಬ್ಬವೆಂದು ಹೇಳುವರು. ಇದನ್ನು ತುಳು ತಿಂಗಳ ಪೊನ್ನಿ (ಫೆಬ್ರವರಿ) ತಿಂಗಳಲ್ಲಿ ಆಚರಿಸುವರು. ಈ ಹಬ್ಬವನ್ನು ಮೂರು ದಿನ ಆಚರಿಸುವರು. ಮೊದಲನೆ ದಿನ ಭತ್ತ (ಲಕ್ಷ್ಮಿ) ತನ್ನ ಮನೆಗೆ ಬಂದದ್ದು ಇನ್ನು ಯಾರ ಮನೆಗೂ ಹೋಗಬಾರದೆಂಬ ಭಾವನೆಯಿಂದ ಭತ್ತದ ಕಡಿಕೆಯ ಮೇಲಿರುವ ಭತ್ತದ ರಾಶಿಯ ಮೇಲೆ ಚೂರಿಮರದ ಮುಳ್ಳನ್ನು, ಕತ್ತಿ ಮತ್ತು ಕಲ್ಲನ್ನು ಹೇರುತ್ತಾರೆ. ಇದನ್ನು ತಪ್ಪಿಸಿ ಭತ್ತ ಹೋಗುವುದಿಲ್ಲವೆಂಬ ನಂಬಿಕೆ. ಅಲ್ಲದೆ ಈ ರೀತಿ ಭಾರ ಹೇರಿದ ಮೂರು ದಿನಗಳವರೆಗೆ ಅಲ್ಲಿದ್ದ ಭತ್ತವನ್ನು ತೆಗೆಯಬಾರದು.

ಎರಡನೇಯ ದಿನ ಮನೆ ಮತ್ತು ಅಂಗಳವನ್ನು ಸಾರಿಸಿ ಎಲ್ಲರೂ ಶುಭ್ರವಾದ ಬಟ್ಟೆಯನ್ನು ಧರಿಸಿ, ವಿರಾಮ ಪಡೆಯುವ ದಿನ. ಅಂದಿನ ದಿನ ಕೆಲವರು ಕಾಡು ಪ್ರಾಣಿಗಳ ಬೇಟೆ, ಮೀನಿನ ಬೇಟೆ ಮಾಡುವರು. ಇನ್ನು ಕೆಲವರು ಕೋಳಿ ಜೂಜಿನಲ್ಲಿ ನಿರತರಾಗುವರು.

ಮೂರನೆಯ ದಿನ, ಇನ್ನು ಮುಂದೆ ಬೇಸಿಗೆ ಕಾಲ ಬರುವುದರಿಂದ ಭೂಮಿ ತಾಯಿ, ತಂಪಾಗಿರಲೆಂದು ಭೂಮಿಗೆ ಎಣ್ಣೆ ಕೊಡಬೇಕೆಂದು ಮನೆಯ ಅಂಗಳವನ್ನು ಸಗಣಿಯಿಂದ ಸಾರಿಸಿ, ರಂಗೋಲೆ ಹಾಕಿ ಎಣ್ಣೆ ಹುಯ್ದು ಅಲ್ಲಿ ಮಸಿ ಚೂರನ್ನು, ಕತ್ತಿಯನ್ನು ಇಡುವರು. ಇದರಿಂದ ಭೂಮಿ ತಾಯಿ ಇಷ್ಟರವರೆಗೆ ಅಶುದ್ಧಳಾದ್ದರಿಂದ ಸ್ನಾನ ಮಾಡಿ ಶುಚಿಯಾಗಲೆಂಬ ಅಭಿಪ್ರಾಯ. ಈ ರೀತಿ ಕಿಡ್ಡಾಸ ಹಬ್ಬವನ್ನು ಮೂರು ದಿನ ಸಂತೋಷದಿಂದ ಆಚರಿಸುವರು.

******************************

ಭಾಗ-3

# ಸೆತ್ತವರ ಶವ ಸಂಸ್ಕಾರ ಮತ್ತು ಅಂತಿಮ ಕ್ರಿಯೆ

ಸತ್ತವರ ಬಾಯಿಗೆ ಪ್ರಪ್ರಥಮವಾಗಿ ಮನೆಯವರು ಕಂಚಿನ ಬಟ್ಟಲಲ್ಲಿ ಬೆಳ್ತಕ್ಕಿ, ಶುದ್ಧ ನೀರು ಅಥವಾ ಎಳನೀರು ಹಾಕಿ ಅದನ್ನು ತುಳಸಿ ಕೊಡಿಯಿಂದ ಸತ್ತವರ ಬಾಯಿಗೆ ನೀರು ಮುಟ್ಟಿಸಿ 'ಸ್ವರ್ಗಕ್ಕೆ ಹೋಗು' ಎಂದು ಮನಸಾರೆ ಗಟ್ಟಿಯಾಗಿ ಹೇಳಿ ನೀರು ಬಿಡುವರು. ಊರಿನ ನೆರೆಕರೆಯವರಿಗೆ ತಿಳಿಸುವ ಸಂಕೇತವಾಗಿ ಆಕಾಶಕ್ಕೆ ಜೋಡು ಗುಂಡುಗಳನ್ನು ಹಾರಿಸುವರು. ಮೃತರ ಪ್ರಾಣವನ್ನು ಕೊಂಡೊಯ್ಯಲು ಬಂದ ಯಮದೂತರು ಹೋಗಲು ಮನೆಯ ಮಾಡನ್ನು ತೂತು ಮಾಡಿ ಒನಕೆ ದಾಟಿಸುವರು. ತೆಂಗಿನಕಾಯಿ ಒಡೆದು ಇಡುವರು. ಸತ್ತವರ ಶರೀರವನ್ನು ನೇರವಾಗಿ ಇಟ್ಟು ಕೈಕಾಲುಗಳನ್ನು ನೇರುಪಡಿಸಿ ಕಣ್ಣುಗಳನ್ನು ಸಹ ಸರಿಯಾಗಿ ಮುಚ್ಚುವಂತೆ ಕೈಯಿಂದ ತೀಡಿ ಸರಿಪಡಿಸಿ ತೆಂಕು ಭಾಗಕ್ಕೆ (ದಕ್ಷಿಣ) ತಲೆಯಿಟ್ಟು ಮಲಗಿಸಿ ಬಿಳಿ ಬಟ್ಟೆಯನ್ನು ಶವದ ಮೆಲೆ ಹಾಕಿ ಒಂದು ದೀವಿಗೆಯನ್ನು ಹಚ್ಚಿ ಇಡುವರು. ಅಲ್ಲದೆ ಶವದ ವಾಸನೆ ಬಾರದಂತೆ ಮಣ್ಣಿನ ಚಟ್ಟಿ ಯಾ ಮಡಕೆಯಲ್ಲಿ ಬೆಂಕಿ ಹಾಕಿ ಅದಕ್ಕೆ ಗಂಧದ ಚೂಕೆ ಹಾಗೂ ನೆಕ್ಕಿ ಸೊಪ್ಪನ್ನು ಹಾಕಿ ಹೊಗೆ ಕೊಡುವರು. ಗಂಧದ ಕಡ್ಡಿ ಹಚ್ಚಿ ಇಡುವರು. ಸತ್ತವರ ಶವ ಸಂಸ್ಕಾರವಾಗದೆ ಆ ಮನೆಯವರು ಆಹಾರ ಪಾನೀಯಗಳನ್ನು ಸೇವಿಸಬಾರದು. ನೆರೆಕರೆಯವರಿಗೆ, ಊರಿನವರಿಗೆ, ನೆಂಟರಿಷ್ಟರಿಗೆ ಸಾವಿನ ಸುದ್ದಿ ಹೇಳುವ ಕ್ರಮವನ್ನು ತ್ವರಿತಗೊಳಿಸುವರು.

ನೆರೆಕರೆಯವರು, ಊರಿನವರು, ನೆಂಟರಿಷ್ಟರು ಬಂದ ಕೂಡಲೇ ಎಲ್ಲರೂ ಸೇರಿ ಶವವನ್ನು ಹೊರತೆಗೆದು ಒಂದು ಬೆಂಚಿನ ಮೇಲೆ ಮಲಗಿಸಿ ಎಣ್ಣೆ ಅರಸಿನವನ್ನು ಒಂದು ತೆಂಗಿನ ಚಿಪ್ಪಿನಲ್ಲಿ ಕಲಸಿ, ಗರಿಕೆ ಹುಲ್ಲಿನಿಂದ ಮೈಗೆ ಲೇಪಿಸಿ ತೂತು ಚಿಪ್ಪಿನಿಂದ ನೀರನ್ನು ಮೈಗೆ ಹುಯ್ಯಿದು ಸ್ನಾನ ಮಾಡಿಸುವರು. ಗಡ್ಡ ಮೀಸೆ ಇದ್ದರೆ ಅದನ್ನು ಸಹ ಸಲ್ಲಿಯೇ ತೆಗೆಯುವರು. ನಂತರ ಮಡಿ ಬಟ್ಟೆಯನ್ನು ಹಾಕಿ ಶೃಂಗರಿಸುವರು. ಆದರೆ ಶರ್ಟ್ (ಅಂಗಿ)ನ್ನು ಮಾತ್ರ ಇದಿರು ಭಾಗವನ್ನು ಹಿಂಭಾಗ ಮಾಡಿ ಹಾಕುವರು. ತಲೆಗೆ ಪೇಟ ಕಟ್ಟಿ ಹಣೆಗೆ ಬೊಟ್ಟು ಹಚ್ಚಿ ಕೊರಳಿಗೆ ಹೂಮಾಲೆಯನ್ನು ಹಾಕಿ ಅಲಂಕರಿಸಿ ತಂದು ಮನೆಯ ಕೈಯಾಲೆಯಲ್ಲಿ ಉತ್ತರ ದಕ್ಷಿಣವಾಗಿ ಒಲಿ ಚಾಪೆ ಹಾಕಿ ಅದರ ಮೇಲೆ ಮಲಗಿಸುವುದು. ಮೊದಲು ಮನೆಯುವರು ಬಿಳಿ ಬಟ್ಟೆಯನ್ನು ಶವದ ಮೇಲೆ ಹಾಕಿದ ನಂತರ ಊರಿನವರು, ನೆಂಟರಿಷ್ಟರು ತಂದ ಬಟ್ಟೆಗಳನ್ನು ಹಾಕುವರು. ಹಾಲು, ಎಳನೀರು ಮಿಶ್ರ ಮಾಡಿ

ಕಂಚಿನ ಬಟ್ಟಲಲ್ಲಿ ಇಟ್ಟು, ಬಂದವರು ತುಳಸಿ ಕೊಡಿಯಿಂದ ಶವದ ಬಾಯಿಗೆ ನೀರು ಕೊಟ್ಟು ಹಣ ತಂದವರು ಶವದ ಹಣೆಗೆ ಹಚ್ಚುವುದು (ಶವಕ್ಕೆ ಮಾಡುವ ಎಲ್ಲಾ ಕ್ರಮಗಳಲ್ಲಿ ಎಡಗೈಯನ್ನು ಪ್ರದಕ್ಷಿಣೆಯ ಬದಲು ಅಪ್ರದಕ್ಷಿಣೆ ಮಾಡುವರು.)

ಮೃತರ ಮನೆಯವರು ಕತ್ತಿ, ಮಚ್ಚು, ಕೊಡಲಿ, ಗುದ್ದಲಿ ಇತ್ಯಾದಿಗಳನ್ನು ಮನೆಯ ಅಂಗಳಕ್ಕೆ ತಂದಿಟ್ಟ ನಂತರ ಊರಿನವರು ಕಟ್ಟಿಗೆ ಮಾಡಲು ಹೋಗುವರು. ಕಟ್ಟಿಗೆ ಕಡಿಯಲು ಹೋದಾಗ ಮೊತ್ತ ಮೊದಲು ಕುಂಟಿಗೆ ನಿಲ್ಲವವನು ಕಟ್ಟಿಗೆಗೆ ಬೇಕಾದ ಮರಕ್ಕೆ ಕಡಿಯಬೇಕು. ತದನಂತರ ಊರಿನವರು ಕಟ್ಟಿಗೆ ಕಡಿಯುವರು. ಅಲ್ಲದೆ ಶವಸಂಸ್ಕಾರ ಮಾಡಲು ಗೊತ್ತುಪಡಿಸಿದ ಸ್ಥಳಕ್ಕೆ ಕಟ್ಟಿಗೆ ತಂದು ಶೇಖರಿಸುವರು. ಶವವನ್ನು ಸುಡಲು ಬೇಕಾಗುವಷ್ಟು ಕಟ್ಟಿಗೆ ಸಂಗ್ರಹವಾದ ನಂತರ ಸ್ಥಳವನ್ನು ಸಮತಟ್ಟು ಮಾಡಿ ತೆಂಕು ಬಡಗು (ದಕ್ಷಿಣ–ಉತ್ತರ) ಆಗಿ ಕಾಟ ಒಟ್ಟುವಂತೆಯೂ ಸೌದೆ ಉರಿಯುವ ಸಮಯದಲ್ಲಿ ಸೌದೆ ಬೀಳದಮತೆ ನಾಲ್ಕು ಹಸಿ ಮರದ ಕಂಬಗಳನ್ನು ಬಲವಾಗಿ ನೆಟ್ಟು (ತಾಕು ಕಂಬ) ಉದ್ದಕ್ಕೆ ನಾಲ್ಕು ಅಡಿಯ ಅಂತರದಲ್ಲಿಯೂ, ಅಡ್ಡಕ್ಕೆ ಎರಡು ಅಡಿಯ ಅಂತರದಲ್ಲಿಯೂ ತಾಕು ಕಂಬಗಳನ್ನು ನೆಡುವರು. ಅದರ ಮಧ್ಯದಲ್ಲಿ ಶವದ ಉದ್ದಳತೆಗೆ ಸರಿಯಾಗಿ ಕಾಟ ಒಟ್ಟುವರು. ಒಟ್ಟು ಬೇಕಾಗುವ 2/3ನೇ ಭಾಗದಷ್ಟು ಕಟ್ಟಿಗೆಯನ್ನು ಒಟ್ಟಿದ ನಂತರ (ಹಲಸು, ಮಾವು, ಗಂಧ, ಸಡ್ಲೆ ಅಥವಾ ಹಾಲೆ ಮರದ ಸೌದೆಗಳನ್ನು ಶಾಸ್ತ್ರಕ್ಕದಾದರೂ ಸ್ವಲ್ಪ ಹಾಕುವರು) ಸ್ವಲ್ಪ ಜನರು ಕಾಟದ ಹತ್ತಿರ ನಿಲ್ಲುವರು. ಉಳಿದವರು ಬಿದಿರಿನ ಚಟ್ಟ ಕಟ್ಟುವುದಕ್ಕೆ ಮನೆಗೆ ಹೋಗುವರು. ಎಲ್ಲರೂ ಕಾಟಬಿಟ್ಟು ಹೋಗುವಂತಿಲ್ಲವೆಂದು ಹಿಂದಿನಿಂದಲೂ ನಡೆದು ಬಂದ ಕ್ರಮ. ಹಾಗೇನಾದರೂ ಎಲ್ಲರೂ ಹೋಗುವ ಅವಶ್ಯ ಬಂದಲ್ಲಿ ಒಂದು ಕಲ್ಲು, ಚೂರಿಮುಳ್ಳಿನ ಬಳ್ಳಿಯನ್ನು ಕಾಟದ ಮೇಲಿಟ್ಟು ಹೋಗುವರು. ಕಲ್ಲು, ಚೂರಿಮುಳ್ಳಿನ ಬಳ್ಳಿಯನ್ನು ಕಾಟದ ಮೇಲೆ ಇಡುವ ಕ್ರಮವೆಂದರೆ ಹಿಂದೊಮ್ಮೆ ಒಂದು ಶವದ ಮನೆಯಲ್ಲಿ ಶವಸಂಸ್ಕಾರಕ್ಕಾಗಿ ಎಲ್ಲಾ ಏರ್ಪಾಡುಗಳನ್ನು ಮಾಡಿ ಸೌದೆ ಒಡೆದು ಅಡಿಕಾಟ ಒಟ್ಟಿ ಅದರ ಮೇಲೆ ಯಾವ ವಸ್ತುವನ್ನು ಇಡದೆ ಎಲ್ಲರೂ ಮನೆಗೆ ಬಂದರಂತೆ, ಪದ್ಧತಿಯಂತೆ ಶವವನ್ನು ಬಿದಿರಿನ ಚಟ್ಟದಲ್ಲಿಟ್ಟು ಹೊತ್ತುಕೊಂಡು ಸ್ಮಶಾನಕ್ಕೆ ಹೋದರಂತೆ. ಅಲ್ಲಿ ಹೋಗುವಷ್ಟರಲ್ಲಿ ಇವರು ಒಟ್ಟಿಟ್ಟ ಕಾಟದ ಸುತ್ತಲೂ ವಿಚಿತ್ರ ಆಕಾರದ ಭೂತಗಳು ಕುಣಿಯುತ್ತಿದ್ದುವಂತೆ. ಈ ಭೂತಗಳನ್ನು ಕಂಡು ಜನವರು ಗಾಬರಿಗೊಂಡಾಗ ಆ ಭೂತಗಳು ಇವರನ್ನು ಕಂಡು ಓಡಿದವಂತೆ. ಆದರೆ ಈ ಶವದ ಭೂತವು ನಿಂತು ಜನರ ಕಡೆ ನೋಡಿ 'ಒಟ್ಟಿದ ಕಾಟದ ಸೌದೆಯ ಮೇಲೆ ಕಲ್ಲು, ಚೂರಿ ಮುಳ್ಳನ್ನಾದರೂ ಇಡ್ಡು ಹೋಗಬೇಕೆಂದು ಹೇಳಿ

ಮಾಯವಾಯಿತಂತೆ. ಅಂದಿನಿಂದ ಕಾಟದ ಮೇಲೆ ಕಲ್ಲು, ಚೂರಿ ಮುಳ್ಳನ್ನು ಇಡುವ ಕ್ರಮ ಬಂತೆಂದು ಹಿರಿಯರು ಹೇಳುತ್ತಾರೆ.

**ಶವದ ಚಟ್ಟ ಕಟ್ಟುವ ಕ್ರಮ :**

ಎರಡು ಬಿದಿರನ್ನು ಉದ್ದಕ್ಕೆ ಇಟ್ಟು ಶವ ಇಡಲು ಬೇಕಾದಷ್ಟು ಅಗಲಕ್ಕೆ ಸಮನಾಂತರವಾಗಿ ಬಿದಿರಿನ ತುದಿಗೆ ಅಡ್ಡ ಪಟ್ಟಿ ಕಟ್ಟಿ ಉಳಿದ ತಟ್ಟೆಗಳನ್ನು ಕಟ್ಟುವರು. ಈ ರೀತಿ ಅಡ್ಡ ತಟ್ಟೆಗಳನ್ನು ಐದರಿಂದ ಏಳು ತಟ್ಟೆಗಳನ್ನು ಕಟ್ಟುವರು. ಎರಡು ಬಿದಿರುಗಳನ್ನು ತೋರಣ ಕಟ್ಟುವುದಕ್ಕೆ ಬಿಲ್ಲನಾಕೃತಿಯಲ್ಲಿ ಬಗ್ಗಿಸಿ ಎರಡು ಬಿದಿರಿನ ತಟ್ಟೆಗಳನ್ನು ಕಟ್ಟಿ ಚಟ್ಟ ಶೃಂಗರಿಸುವುದಕ್ಕೆ ಅನುಕೂಲ ಮಾಡಿಕೊಳ್ಳುವರು. ನಂತರ ಶವದ ಎಡದ ಕಾಲಿನ ಭಾಗದಲ್ಲಿ ಒಂದು ಸೇರು ಭತ್ತವನ್ನು ತಲೆಯ ಬಲ ಭಾಗದಲ್ಲಿ ಒಂದು ಸೇರು ಅಕ್ಕಿಯನ್ನು ಕಟ್ಟಿ ಬದಿಗೆ  ನಿಲ್ಲುವರು. ಒಂದು ತೆಂಗಿನಕಾಯಿ ಒಡೆದು ಒಂದು ಗಡಿಯಲ್ಲಿ ದೀಪದ ಎಣ್ಣೆ ಹಾಕಿ ಗಂಧದ ಮರದ ಕಟ್ಟಿಗೆ ಮಾಡಿ ಅದಕ್ಕೆ ಬಟ್ಟೆ ಸುತ್ತಿ ಎಣ್ಣೆ ಹಾಕಿ ತಲೆ ಭಾಗದಲ್ಲಿ ಬೆಳಕು ಹಚ್ಚಿ ಇಡುವರು. ಇದೇ ರೀತಿ ಮಾಡಿ ಇನ್ನೊಂದು ಗಡಿಯನ್ನು ಕಾಲಿನ ಬದಿಯಲ್ಲಿ ಇಡುವರು.

ಶವದ ಬಾಯಿಗೆ ಕುಂಟೆಗೆ ನಿಲ್ಲುವವನು ಮನೆಯ ಮೆಟ್ಟು ಕಲ್ಲಿನಲ್ಲಿ ಎಲೆ ಅಡಿಕೆ ಜಜ್ಜಿ ಇಡುವರು. ಆ ಮೇಲೆ ಕುಟುಂಬದವರೆಲ್ಲರೂ ಮೇಲ್ಮೈ ವಸ್ತ್ರವನ್ನು ಬಿಚ್ಚಿ ಸಾಲಾಗಿ ನಿಂತು ಹಿರಿಯರ ಮುಂದೆ ನಂತರ ಕಿರಿಯರು ಶವದ ಸುತ್ತು ಮೂರು ಬಾರಿ ಅಪ್ರದಕ್ಷಿಣೆ ಬರುವರು. ಶವದ ಸುತ್ತು ಬರುವಾಗ ಎಲ್ಲರೂ 'ನಾರಾಯಣ, ನಾರಾಯಣ' ಎಂದು ದೇವರನಾಮ ಪಠಿಸುತ್ತಾ, ಸತ್ತವರಿಗೆ ಹಿರಿಯರು ಎಡಗೈಯಿಂದ ಶವದ ತಲೆಯನ್ನು, ಕಿರಿಯರು ಎಡಗೈಯಿಂದ ಕಾಲು ಮುಟ್ಟಿ ಶರಣು ಮಾಡುವರು. ಮನೆಯವರೆಲ್ಲರೂ ಶವದ ಬಾಯಿಗೆ ತುಳಿಸಿ ಕೊಡಿಯಿಂದ ನೀರು ಕೊಟ್ಟು ನಂತರ ಮನೆಯವರು, ಊರಿನವರು, ನೆಂಟರಿಷ್ಟರು ಸೇರಿ ಮನೆಯ ಮೆಟ್ಟುಕಲ್ಲಿಗೆ ಹೊಂದಿಸಿ ಇಟ್ಟು ಚಟ್ಟಕ್ಕೆ ಶವವನನ್ನು ಎತ್ತಿ ಕಾಲು ಮುಂಭಾಗವಾಗಿಯೂ, ತಲೆಯು ಹಿಂಭಾಗವಾಗಿಯೂ ಒಲಿ ಚಾಚೆ ಇದ್ದಂತೆ ಸೇರಿಸಿ ತಂದಿಡುವರು. ಅಲ್ಲಿ ಶವದ ಮೇಲೆ ಹೊದಿಸಿದ ಉದ್ದನೆಯ ಬಟ್ಟೆ ನೋಡಿ ಅದನ್ನು ಕುಂಟೆಗೆ ನಿಂತವನ ಹಸ್ತ ಕೊಟ್ಟು ಒಂದು ಇಂಚಿನ ಅಗಲ ಸುತ್ತು ನಾಲ್ಕು ಭಾಗ ಹರಿಸಯುವಂತೆ ಹೇಳಿ, ಹರಿದ ಅದನ್ನು ನಾಲ್ಕು ಭಾಗ ಮಾಡಿ ಒಂದು ತುಂಡಿನಿಂದ ಕಾಲಿನ ಎರಡು ಹೆಬ್ಬೆರಳನ್ನು ಜೋಡಿಸಿ ಕಟ್ಟಿ ಮತ್ತೊಂದು ತುಂಡು ಬಟ್ಟೆಯಿಂದ ಕೈ ಬೆರಳುಗಳನ್ನು ಕಟ್ಟುವರು. ಇನ್ನೊಂದು ತುಂಡು ಬಟ್ಟೆಯನ್ನು ಊರಿನವನೊಬ್ಬನಿಗೆ ಕೊಟ್ಟು ಉಳಿದ ಒಂದು ತುಂಡು ಬಟ್ಟೆಯನ್ನು ಕುಂಟೆಗೆ ನಿಂತವನು ಇಟ್ಟುಕೊಳ್ಳುವನು. ಊರಿನವರು

ಬಟ್ಟೆ ತೆಗೆದುಕೊಳ್ಳುವವನಿಗೆ ಊರು ಕುಂಟಿಗೆ ಎಂದು ಹೇಳುವರು. ಆ ಬಟ್ಟೆಯ ತುಂಡನ್ನು ತೆಗೆದುಕೊಂಡು ಮನೆ ಕುಂಟಿಗೆಯು ಉತ್ತರ ಕ್ರಿಯೆ ಕಳೆಯುವವರೆಗೆ ತನ್ನ ಬಳಿಯೇ ಇಟ್ಟುಕೊಳ್ಳತಕ್ಕದ್ದು.

ಶವವನ್ನು ಅಲುಗಾಡದಂತೆ ಚಟ್ಟಕ್ಕೆ ಕಟ್ಟಿ, ಕಾಲು ಕಡೆಯಿಂದ ಊರಿನವರು, ತಲೆ ಕಡೆಯಿಂದ ಮನೆಯವರು ಚಟ್ಟವನ್ನು ಎತ್ತಿ 'ನಾರಾಯಣ, ನಾರಾಯಣ' ಎಂದು ಹೇಳುತ್ತಾ ಹಿಂದಕ್ಕೂ ಮುಂದಕ್ಕೂ ಮೂರು ಬಾರಿ ಜೂಗಿಸಿ ಹೆಗಲ ಮೇಲೆ ಇಟ್ಟುಕೊಂಡು ಸ್ಮಶಾನದ ಕಡೆಗೆ ಸಾಗುವರು. ಅರ್ಧ ದಾರಿ ಸಾಗಿದ ನಂತರ ಮನೆಯಿಂದ ತಂದ ಐದು ವೀಳ್ಯದೆಲೆ, ಒಂದು ಅಡಿಕೆ ಮತ್ತು ಅನ್ನದ ಬುತ್ತಿಯನ್ನು ಯಾರಾದರೊಬ್ಬರು ಹೋಗುವ ಹಾದಿಯ ಎಡಭಾಗದಲ್ಲಿ ಯಾವುದಾದರೊಂದು ಮರದ ಬುಡದಲ್ಲಿ ಇಡುವರು.

'ದಾರಿ ಬುತ್ತಿ ಮತ್ತು ಎಲೆ ಅಡಿಕೆ ಇಡುವುದು ಯಮಧರ್ಮ ರಾಯನ ಅಜ್ಞೆಯಂತೆ ಯಮದೂತರು ಪ್ರಾಣವನ್ನು ಕೊಂಡೊಯ್ಯುವಾಗ ಆ ಮಾರ್ಗದಲ್ಲಿ ಉಣಲು ಬುತ್ತಿ ಇರಲೆಂದೂ. ಊಟವಾದ ನಂತರ ಜಗಿಯಲು ಎಲೆ ಅಡಿಕೆ ಇಡುವುದೆಂದೂ ಹಿರಿಯರು ಹೇಳುತ್ತಾರೆ. ಅಲ್ಲದೆ ಐದು ವೀಳ್ಯದೆಲೆ ಪಂಚ ಪಾಂಡವರೆಂದೂ ಒಂದು ಅಡಿಕೆ ದ್ರೌಪದಿ ಸಂಕೇತವೆಂದೂ ಹೇಳುತ್ತಾರೆ.

ದಾರಿ ಬುತ್ತಿಯನ್ನು ಇಟ್ಟ ನಂತರ ತಲೆಯ ಕಡೆ ಹೊತ್ತವರು ಕಾಲು ಕಡೆಗೂ, ಕಾಲು ಕಡೆ ಹೊತ್ತವರು ತಲೆಯ ತಡೆ ಹೊತ್ತು ಸಾಗಿಸುವರು. ಶವವನ್ನು ವಾದ್ಯಗೋಷ್ಠಿಗಳಿಂದ ಸಾಗಿಸಲಾಗುವುದು. ಕೆಲವು ಕಡೆ ಅಕ್ಕಿ ಮತ್ತು ಚಿಲ್ಲರೆ ನಾಣ್ಯಗಳ ಮಿಶ್ರಣವನ್ನು ಮಾಡಿ ಶವದ ಮೇಲೆ ಎರಚುತ್ತಾ ಹೋಗುವರು. ಒಂದು ಚಿಕ್ಕ ಮಣ್ಣಿನ ಮಡಕೆಯಲ್ಲಿ ನೀರನ್ನು ಇನ್ನೊಂದು ಚಟ್ಟಿಯಲ್ಲಿ ಬೆಂಕಿಯನ್ನು ತೆಗೆದುಕೊಂಡು ಜೊತೆಯಲ್ಲಿ ಗಂಧದ ಮರದ ಸಣ್ಣ ಸೀಳುಗಳು (ಚೂಕೆ) ಕೊಬ್ಬರಿ, ತೆಂಗಿನಕಾಯಿ. ಎಣ್ಣೆ ಮತ್ತು ತುಪ್ಪ ಮುಂತಾದವುಗಳನ್ನು ಬೆಂಕಿ ಉರಿಸುವುದಕ್ಕೆ ಹಾಕಲು ತೆಗೆದುಕೊಂದು ಹೋಗುತ್ತಾರೆ. ಕಾಟದ ಬಳಿ ತಲುಪಿದ ನಂತರ ಕಾಟದ ಮೇಲಿಟ್ಟ ಕಲ್ಲು, ಚೂರಿ ಮುಳ್ಳನ್ನು ದೂರ ಎಸೆದು ಶವವನ್ನು ಮಾತ್ರ ಮೇಲೆತ್ತಿ ಮತ್ತು ಉತ್ತರ ದಕ್ಷಿಣವಾಗಿ ಕಾಟದ ಮೇಲಿರಿಸುವರು. ಆಗ ಎಲ್ಲರೂ 'ನಾರಾಯಣ ನಾರಾಯಣ' ಎಂದು ಸ್ತುತಿಸುವರು. ನಂತರ ಶವದ ಚಟ್ಟ ಮತ್ತು ಚಾಪೆಯನ್ನು ಕಡಿದು ಎಸೆಯಬೇಕು. ಶವಕ್ಕೆ ಹೊದಿಸಿದ ಮೂರು ಅಥವಾ ಐದು ಬಟ್ಟೆಗಳನ್ನು ಬಿಟ್ಟು ಉಳಿದಲ್ಲಿ ಊರಿನ ಕುಳುವಾಡಿಗೆ ಹಾಗೂ ವಾದ್ಯದವರಿಗೂ ಹಂಚಬೇಕು. ಕಂಚಿನ ಬಟ್ಟಲಿನಲ್ಲಿ ಕೂಡಿದ ಹಣವನ್ನು ದಾನ ಮಾಡುವರು. ಶವದ ಮೈಮೇಲೆ ನೂಲು, ತಾಯಿತ, ಬೆರಳುಗಳಿಗೆ

ಕಟ್ಟಿದ ಬಟ್ಟೆ ಎಲ್ಲವವನ್ನು ಬಿಚ್ಚುವರು (ಕೆಲವು ಕಡೆಗಳಲ್ಲಿ ವೆಂಕಟರಮಣ ದೇವರ ಹೆಸರಿನಲ್ಲಿ ಕಷ್ಟಕ್ಕಾಗಿ ಹೇಳಿದ ಹರಿಕೆ ಎಂದು ಕಾಲಿನಲ್ಲಿ ಬೆಳ್ಳಿ ಬೇಡಿ (ಬಳೆ) ಇರುವುದು. ಇದನ್ನು ಸಹ ತೆಗೆದು ಶುದ್ಧ ಮಾಡಿ ಹರಿಸೇವೆ ಸಮಯದಲ್ಲಿ ಮುಡಿಪಿಗೆ ಹಾಕತಕ್ಕದ್ದು) ತದನಂತರ ಶವದ ಬಾಯಿಗೆ ನೀರು ಕೊಟ್ಟು ಮೂರು ಸುತ್ತು ಬರುವರು.

ಸತ್ತವರು ಹೆಣ್ಣಾದರೆ ಅವಳ ಮಂಗಲ್ಯ ಮತ್ತು ಎಲ್ಲಾ ಆಭರಣಗಳನ್ನು ಬಿಚ್ಚಿ ತೆಗೆಯುವರು. ಗಂಡಸು ಸತ್ತರೆ ಹೆಂಡತಿಯ ಮೂಗುತಿ, ಓಲೆ, ಮಾಂಗಲ್ಯ ಮೊದಲಾದವುಗಳನ್ನು ತೆಗೆದು ಕಂಚಿನ ಬಟ್ಟಲಿಗೆ ಹಾಕುವರು. ಮಾಂಗಲ್ಯದ ತುದಿಯಿಂದ ಸ್ವಲ್ಪ ಚಿನ್ನ ತೆಗೆದು ಅದನ್ನು ತುಳಸಿ ನೀರು ಸಮೇತ ಮಾಂಗಲ್ಯದಿಂದ ಶವದ ಬಾಯಿಗೆ ಅವಳ ಕೈಯಿಂದಲೆ ನೀರು ಕೊಡಿಸಿ 'ನಾನು ಮಾಡಿದ ಏನೊಂದು ತಪ್ಪುಗಳಿದ್ದರೂ ಮನ್ನಿಸಿ ಸ್ವರ್ಗಕ್ಕೆ ಹೋಗಿ ಎಂದು ಹೇಳಿಸುವುದು. ಹೆಂಡತಿಯ ಕೈಯಲ್ಲಿದ್ದ ಕಂಕಣ (ಬಳೆ)ವನ್ನು ಶವದ ಎದೆಯ ಮೇಲಿಟ್ಟು ಅವಳ ತವರಿನ ಕಡೆಯವರು ಒಡೆಯುವುದು. ಒಡೆಯುವಾಗ ಗಾಜಿನ ಚೂರು ಶವದ ಮೇಲೆ ಬೀಳದಂತೆ ಬೇರೆಯೇ ವಸ್ತ್ರ ಹಿಡಿದು ಎಚ್ಚರ ವಹಿಸುವುದು. (ಬಳೆ ಒಡೆಯುವುದು ಹಿರಿಯರಿಂದ ನಡೆದು ಬಂತೆಂಬುದರ ಬಗ್ಗೆ ಅಂದಿನಿಂದ ಇಂದಿನ ತನಕ ಸಂಶೋಧಿಚವಿದೆ. ಇಂದಿನ ಆಧುನಿಕ ಮತ್ತು ಮುಂದುವರಿದ ನಾಗರೀಕತೆಯ ಸಮಾಜದಲ್ಲಿ ಇದೊಂದು ಅಮಾನುಷ ಕೃತ್ಯ. ಬಳೆಯನ್ನು ಹೆಣ್ಣು ಮಗುವಿನಿಂದಲೇ ಧರಿಸುವಳು. ಅದು ವಿವಾಹದ ನಂತರ ಪತಿಯಿಂದ ಬಂದ ಉಡುಗೊರೆಯಲ್ಲ. ಮಾಂಗಲ್ಯ, ಮೂಗಿನ ನತ್ತು, ಕಾಲುಂಗುರ ಮುಂತಾದವುಗಳು ವಿವಾಹ ಕಾಲದಲ್ಲಿ ಗಂಡನಿಂದ ಬಂದ ಉಡುಗೊರೆಗಳು. ಆದುದರಿಂದ ಆ ನಿಯಮವನ್ನು ಮನ್ನಾಪಡಿಸಿ ಸ್ತ್ರೀಯ ಇಚ್ಛಾನುಸಾರ ಇರುವಂತೆ ನಮ್ಮ ಸಮಾಜ ಸುಧಾರಕರಲ್ಲಿ ವಿಷಯ ಸಂಗ್ರಹಿಸಿದ ನಾವುಗಳು ನಿಮ್ಮಲ್ಲಿ ನಮ್ಮ ಮಾತೆಯರ ಪರವಾಗಿ ವಿನಂತಿಸಿಕೊಳ್ಳುತ್ತೇವೆ.)

ಮೇಲಿನ ಕ್ರಮ ಮುಗಿದ ನಂತರ ಗಂಧದ ಚೂರುಗಳನ್ನು ಎಲ್ಲರೂ ಎಡಗೈಯಿಂದ ಶವನ ಮೇಲಿಟ್ಟು ಮೇಲ್ಕಾಟವನ್ನು ಒಟ್ಟುವರು. ಈ ಮೊದಲೇ ಒಣ ಬಿದಿರಿನ ಸೂಟೆ (ಹೊಂತಿಗೆ) ಅಥವಾ ಸೌದೆ ಸೀಳುಗಳನ್ನು ಸೂಟೆ ಮಾಡಿಟ್ಟುಕೊಂಡಿರುವರು. ಮನೆಯಿಂದ ಚಟ್ಟಿಯಲ್ಲಿ ತಂದ ಬೆಂಕಿಯಲ್ಲಿ ಎರಡು ಸೂಟೆಗಳಿಗೂ ಬೆಂಕಿ ಹಿಡಿಸಿ ಒಂದನ್ನು ಮನೆಯ ಕುಂಟಿಗೆದಾರನು ಇನ್ನೊಂದನ್ನು ಊರು ಕುಂಟಿಗೆದಾರನು ಹಿಡಿದು ಇಬ್ಬರು ಕಾಟಕ್ಕೆ ಮೂರು ಸುತ್ತು ಅಪ್ರದಕ್ಷಿಣೆ ಬರುವರು. ನಂತರ ಮನೆಯ ಕುಂಟಿಗೆಯವನು ತಲೆ ಕಡೆಯಿಂದಲೂ, ಊರಿನ ಕುಂಟಿಗೆಯವನು ಕಾಲು ಕಡೆಯಿಂದರಲೂ ಕಾಟಕ್ಕೆ ಬೆಂಕಿ ಹಚ್ಚುವರು. ತದನಂತರ

ಮನೆಯಿಂದ ತಂದ ಕೊಬ್ಬರಿ, ಎಣ್ಣೆ, ತುಪ್ಪ ಮುಂತಾದವುಗಳನ್ನು ಬೆಂಕಿ ಉರಿಸಲು ಉಪಯೋಗಿಸುವರು. ಬೆಂಕಿ ಸರಿಯಾಗಿ ಉರಿದು ಎರಡು ಭಾಗಗಳಿಂದ ನಡು ಭಾಗಕ್ಕೆ ಸೇರುವುದೆಂದು ತಿಳಿದಾಗ ಸೌದೆ ಕಡಿಯಲು ಉಪಯೋಗಿಸುವ ಕತ್ತಿ, ಕೊಡಲಿಗಳನ್ನು ಮನೆಯ ಕುಂಟಿಗೆಯವನು ಒಂದು ಬದಿಯಿಂದ ಊರು ಕುಂಟಿಗೆಯವನು ಇನ್ನೊಂದು ಬದಿಯಿಂದ ಅಡ್ಡಕ್ಕೆ ತಿರುಗಿ ಎಡ ಕೈಯಿಂದ ಕಾಟಕ್ಕೆ ಅಡ್ಡಲಾಗಿ ಮೂರು ಬಾರಿ ಎಸೆಯುವನು. ನಂತರ ಕುಂಟಿಗೆ ನಿಂತವನು ನೀರಿನ ಮಡಿಕೆಯನ್ನು ಚಿಕ್ಕ ತೂತು ಮಾಡಿ ಮೂರು ಸುತ್ತು ಅಪ್ರದಕ್ಷಿಣೆ ಬಂದು ಮಡಿಕೆ ಒಡೆದು ಎಸೆಯುವರು. ಆ ಮೇಲೆ ಅಲ್ಲಿಯೇ ಎಲ್ಲರೂ ಕುಳಿತು ಉತ್ತರ ಕ್ರಿಯಾದಿಗಳ ಬಗ್ಗೆ ಮಾತುಕತೆ ನಡೆಸಿ ಎಲ್ಲರೂ ಅವರವರ ಮನೆಗಳಿಗೆ ಹೋಗುವರು.

ಶವ ಸಂಸ್ಕಾರದ ಮನೆಯವರು, ಊರಿನವರು, ನೆಂಟರಿಷ್ಟರು ಎಲ್ಲರೂ ತಣ್ಣೀರಿನಲ್ಲಿ ಸ್ನಾನ ಮಾಡತಕ್ಕದ್ದು. ಅನಂತರ ಕುಂಟಿಗೆ ನಿಂತವನು ಹೊರೆ ತಿರುಗಾಡುವುದು, ಮದ್ಯ, ಮಾಂಸ ಸೇವಿಸುವುದು, ಹಾಲು ತುಪ್ಪ ಇತ್ಯಾದಿಗಳನ್ನು ಕರ್ಮಕ್ರಿಯೆ ಮುಗಿಯುವವರೆಗೆ ಅಂದರೆ ಹನ್ನೊಂದು ದಿವಸಗಳ ತನಕ ಉಪಯೋಗಿಸಬಾರದು. ಒಪ್ಪೊತ್ತಿನ ಊಟಕ್ಕಾಗಿ ರಾಗಿ, ಗೋಧಿ, ಅವಲಕ್ಕಿ, ಹಣ್ಣು ಹಂಪಲು ಉಪಯೋಗಿಸುವರು. ಪ್ರತಿ ದಿನ ರಾತ್ರಿ ಹೊತ್ತು ಅಂದರೆ ತಿಥಿ ಕರ್ಮಾಂತರ ಮುಗಿಯುವ ತನಕ ಒಂದು ಚೆಂಬು ನೀರು ಮೃತನನ್ನು ಮಲಗಿಸಿದ ಸ್ಥಳದಲ್ಲಿ ಇಡತಕ್ಕದ್ದು. ಕುಂಟಿಗೆ ನಿಂತವನು ಬಿಳಿವಸ್ತ್ರ ಉಡುವುದು ಹಾಗೂ ಮೈಗೆ ಶರಟು ಹಾಕಬಾರದು. ಹೆಗಲಿಗೆ ಬಿಳಿಬಟ್ಟೆ ಮಾತ್ರ ಹಾಕಬಹುದು. ಸೌದೆ ಕಡಿದ ಕತ್ತಿ, ಕೊಡಲಿ, ಮತ್ತು ಮತ್ತು ಗುಂಡಿ ತೆಗೆದ ಹಾರೆ ಗುದ್ದಲ್ಲಿ ಇತ್ಯಾದಿಗಳನ್ನು ಮನೆಯಿಂದ ಹೊರಗಡೆಯೇ ಇಡತಕ್ಕದ್ದು. ಶವವನ್ನು ಸ್ನಾನ ಮಾಡಿಸಲು ಉಪಯೋಗಿಸಿದ ಹಂಡೆ ಪಾತ್ರೆಗಳನ್ನು ಬೋರಲು ಹಾಕಿ ಹೊರಗಡೆಯೇ ಶುದ್ಧ ನಡೆಯುವ ತನಕ ಯಾವ ವಸ್ತುಗಳನ್ನು ಒಳಗೆ ತೆಗೆದುಕೊಳ್ಳುವಂತಿಲ್ಲ.

**ಕೊಳ್ಳಿ ಕೂಡಿಸುವ ಕ್ರಮ :**

ಮೃತರ ಶರೀರವನ್ನು ಶಾಸ್ತ್ರೋಕ್ತವಾಗಿ ದಹಿಸಿದ ನಂತರ, ಮರು ದಿವಸ ಹೊತ್ತದೆ ಬಾಕಿ ಇರುವ ಕಟ್ಟಿಗೆಗಳನ್ನು ಒಟ್ಟು ಗೂಡಿಸಿ ಪುನಃ ಉರಿಸುವ ಕ್ರಮಕ್ಕೆ ಕೊಳ್ಳಿ ಕೂಡಿಸುವುದು ಎಂದು ಹೇಳುವರು. ಹೊತ್ತದೆ ಬಾಕಿ ಇರುವ ಕಟ್ಟಿಗೆಗಳನ್ನು ಒಟ್ಟುಗೂಡಿಸಿ ಅಲ್ಲಿಗೆ ಹಾಲು, ತುಪ್ಪ ಬಿಟ್ಟು, ಪುನಃ ಬೆಂಕಿ ಹಚ್ಚಿ ಪೂರ್ಣ ಉರಿದ ನಂತರ ಊರವರು, ಮನೆಯವರು ಸ್ನಾನ ಮಾಡಿ ಮನೆಗೆ ಬರುವುದು.

**ಮೂರರ ಶುದ್ಧ (ಬೂದಿ ಮುಚ್ಚುವುದು)**

ಮೃತರ ಶವ ಸಂಸ್ಕಾರ ನಡೆದ ಮೂರನೇಯ ದಿನ ಬೂದಿ ಮುಚ್ಚುವ ಕ್ರಮ ಇರುವುದು. ಆ ದಿನ ಮಡಿವಾಳನನ್ನು ಕರೆಯಿಸಿಕೊಳ್ಳಬೇಕು. ಮಡಿವಾಳನು ತೆಂಗಿನ ನೀರನ್ನು ತುಳಸಿ, ಕೊಡಿಯಿಂದ ಬೂದಿಗೆ ಚಿಮಕಿಸಿ ಶವದ ಹಣೆಯಲ್ಲಿಟ್ಟಿದ್ದ ಹಣ ಅಥವಾ ಚಿನ್ನವನ್ನು ಹುಡುಕಿ ತೆಗೆದುಕೊಳ್ಳುತ್ತಾನೆ. ಅನಂತರ ಮೃತರ ಬೂದಿಯನ್ನು ಹರಿಯುವ ನದಿಗೆ ಬಿಡುವುದಾದರೆ ಮೊದಲು ಕಾಲು ಭಾಗದಿಂದ ನಂತರ ಮಧ್ಯ ಭಾಗದಿಂದ ಕೊನೆಗೆ ತಲೆ ಭಾಗದಿಂದ ಸ್ವಲ್ಪ ಸ್ವಲ್ಪ ಬೂದಿಯನ್ನು ತೆಗೆದು ಬಾಳೆ ಎಲೆಯಲ್ಲಿ ಕಟ್ಟಿ ಹೊಸ ಮಣ್ಣಿನ ಮಡಕೆಯಲ್ಲಿ ತೆಗೆದಿಡುವರು. ನಂತರ ಬೂದಿಯನ್ನು ಕಾಲುಭಾಗ ಬೇರೆ, ಮಧ್ಯಭಾಗ ಬೇರೆ, ತಲೆಯ ಭಾಗ ಬೇರೆ ಬೇರೆ ಮಾಡಿ ಮಧ್ಯದಲ್ಲಿ ಒಂದು ಗುಂಡಿಯನ್ನು ತೆಗೆದು ಮೊದಲು ಕಾಲು ಭಾಗದ ಬೂದಿಯನ್ನು, ನಂತರ ಮಧ್ಯ ಭಾಗದ ಬೂದಿಯನ್ನು, ಕೊನೆಗೆ ತಲೆಯ ಭಾಗದ ಬೂದಿಯನ್ನು ಹಾಕಿ ಮುಚ್ಚಿ ದೂಪೆ ಮೆತ್ತುವುದು. ದೂಪೆಗೆ ಬಡಗು ಭಾಗದಲ್ಲಿ (ಉತ್ತರ) ಮೆಟ್ಟಲುಗಳನ್ನು ಮಾಡಿರಬೇಕು. ದೂಪೆಯ ಸುತ್ತಲೂ ಸರಳಿ ಸೊಪ್ಪನ್ನು ಕುತ್ತಿ ಸ್ನಾನ ಮಾಡಿ ಬರುವುದು. ಇಲ್ಲಿಗೆ ಬೂದಿ ಮುಚ್ಚುವ ಕ್ರಮ ಮುಗಿಯಿತು.

**ನೀರು ನೆರಳಿಗೆ ಇಡುವ ಕ್ರಮ :**

ಶುದ್ಧದ ದಿನ ಮೊದಲ ರಾತ್ರಿ ಎಲ್ಲರು ಭೋಜನ ಮುಗಿಸಿ, ಮೃತರು ಸತ್ತ ಸ್ಥಳವನ್ನು ಶುಚಿಗೊಳಿಸಬೇಕು. ಅಲ್ಲಿ ಗಾಳಿಸಿ, ಜಾಡಿಸಿ ನಯವಾದ ಹುಡಿ ಬೂದಿಯನ್ನು ಇಲ್ಲವೆ ಅಕ್ಕಿಯ ಪುಡಿಯನ್ನು ಎರಡು ಅಡಿ ಅಗಲದಲ್ಲಿ ಎಲ್ಲೂ ಕಲೆ ಬಾರದ ರೀತಿಯಲ್ಲಿ ಹರಡಬೇಕು. ಆ ಬೂದಿಯ ಮೇಲೆ ಒಂದು ಚೆಂಬು ನೀರು ಮತ್ತು ಒಂದು ಎಳನೇರನ್ನು (ಮೇಲ್ಭಾಗ ಮಟ್ಟವಾಗಿ ಕತ್ತರಿಸಿ) ಒಂದಕ್ಕೊಂದು ಅಡಿ ಅಂತರದಲ್ಲಿ ಇಡಬೇಕು. ಮೇಲಿನಿಂದ ಒಂದು ನೂಲಿನಲ್ಲಿ ಮಷಿ ತುಂಡನ್ನು ಕಟ್ಟಿ ನೀರಿಗೆ ಮುಟ್ಟುವಂತೆಯೂ, ಇನ್ನೊಂದು ನೂಲಿನಲ್ಲಿ ಅರಸಿಣದ ತುಂಡನ್ನು ಕಟ್ಟಿ ಎಳನೀರಿಗೆ ಮುಟ್ಟುವಂತೆಯೂ ಇಳಿಬಿಡುವುದು. ಅನಂತರ ಒಂದು ಕುಕ್ಕೆಯಲ್ಲಿ ಮೂರು ಸೇರು ಅಕ್ಕಿ, ಒಂದು ತೆಂಗಿನಕಾಯಿ, ಅಡಿಗೆಗೆ ಉಪಯೋಗಿಸುವ ಎಲ್ಲಾ ಮಸಾಲೆ ಸಾಮಾನುಗಳು (ಬೆಳ್ಳುಳ್ಳಿ ಮತ್ತು ಸಾಸಿವೆಯನ್ನು ಬಿಟ್ಟು) ಸ್ವಲ್ಪ ಸ್ವಲ್ಪ ಬಾಳೆ ಎಲೆಯಲ್ಲಿ ಕಟ್ಟಿಡಬೇಕು. ಒಂದು ಕುಂಬಳಕಾಯಿ, ಒಂದು ಮರ ಬಾಳೆಕಾಯಿ ಗೊನೆ ಮುಂದಾವುಗಳನ್ನು ಎಳನೀರು ಇಟ್ಟ ಸ್ಥಳದಿಂದ ಸ್ವಲ್ಪ ದೂರದಲ್ಲಿ ಇಡಬೇಕು. ಕೆಲವರು ಮದ್ಯವನ್ನು ಕೂಡಾ ಇಡುವರು. ಇದಾದ ನಂತರ ಸುತ್ತು ಒಂದು ತೆರೆಮರೆ ಕಟ್ಟಿ ಬೆಕ್ಕು, ನಾಯಿ, ಮನುಷ್ಯರಾರು ಹೋಗದಂತೆ ಏರ್ಪಡಿಸಿ ಆ ಕೋಣೆಯಲ್ಲಿ

ಯಾವ ಬೆಳಕನ್ನು ಇಡದೆ, ಶಬ್ಧವನ್ನು ಮಾಡದೆ ಜನರಾರು ತಿರುಗಾಡದಂತೆ ವ್ಯವಸ್ಥೆಯಾಗಿರಬೇಕು. ಎಲ್ಲರೂ ಕೋಣೆಯಿಂದ ಹೊರಬಂದ ನಂತರ, ಕುಂಟಿಗೆ ನಿಂತವನು ಒಂದು ಚೆಂಬಿನಲ್ಲಿ ನೀರು ತೆಗೆದುಕೊಂಡು ಮನೆಯ ಮೆಟ್ಟು ಕಲ್ಲಿನಲ್ಲಿ ನಿಂತು ಸ್ವಲ್ಪ ನೀರವನ್ನು ಸುತ್ತಲೂ ಚಿಮುಕಿಸಿ ಅಂಗಳಕ್ಕೂ ಚಿಮುಕಿಸಿ ಒಂಟಿ ಕಾಲಿನಲ್ಲಿ ನಿಂತು ಎರಡು ಕೈಗಳನ್ನು ತಲೆಯ ಹಿಂಭಾಗಕ್ಕೆ ಹಿಡಿದು ತನ್ನ ಪ್ರೀತಿಯ ಹೆಸರಿನಿಂದಲೇ ಕರೆದು 'ಬಾಯಾರಿಕೆಗೆ ನಿನಗೆ ನೀರು ನೆರಳಿಗೆ ಇಟ್ಟಿದ್ದೇವೆ ಬಂದು ಹೋಗು' ಎಂದು ಗಟ್ಟಿಯಾಗಿ ಮೂರು ಬಾರಿ ಕೂಗಿ ಹೇಳಬೇಕು. ನಂತರ ಎಲ್ಲರೂ ಮಲಗುವುದು.

ಬೆಳಗ್ಗಿನ ಜಾವ ನಾಲ್ಕು ಗಂಟೆ ಮುಂಚಿತವಾಗಿ ಎದ್ದು ಬಂದು ನೀರು ನೆರಳಿಗೆ ಇಟ್ಟಲ್ಲಿ ನೋಡುವುದು. ನೀರು ಯಾ ಎಳನೀರಿನ ಮಟ್ಟದಲ್ಲಿ ವ್ಯತ್ಯಾಸ ಕಂಡು ಬಂದರೆ ಅಥವಾ ಕೆಲವೊಮ್ಮೆ ಅಕ್ಕಿ ಹುಡಿ ಯಾ ಬೂದಿ ಚೆಲ್ಲಿದಲ್ಲಿ ಚಿಕ್ಕ ಚಿಕ್ಕ ಹೆಜ್ಜೆಯ ಗುರುತುಗಳು ಕಂಡು ಬಂದರೆ ಮೃತರ ಕೂಳೆ ಬಂದಿದೆಯೆಂಬ ನಂಬಿಕೆ. ಆ ನಂತರ ಕುಂಟಿಕೆ ನಿಂತವನು ಮನೆಯ ಮೆಟ್ಟು ಕಲ್ಲಿನ ಮೇಲೆ ಕುಂಬಳಕಾಯಿಯನ್ನಿಟ್ಟು ಎಡಕೈಯಲ್ಲಿ ಕತ್ತಿಯಿಂದ ಕಡಿದು ಎರಡು ಭಾಗ ಮಾಡಿ. ಒಂದು ಭಾಗವನ್ನು ಪುನಃ ನಾಲ್ಕು ಭಾಗಗಳಾಗಿ ಮಾಡಿ ಒಂದು ಭಾಗ ಮಡಿವಾಳನಿಗೂ. ಇನ್ನೊಂದು ಭಾಗ ಕೌರಿಕನಿಗೂ ತೆಗೆದಿಡಬೇಕು. ಹಾಗೆಯೇ ಒಂದೊಂದು ಚಿಪ್ಪು ಬಾಳೆಕಾಯಿಯನ್ನು ಅವರಿಬ್ಬರಿಗೆ ತೆಗೆದಿಡಬೇಕು. ಉಳಿದೆಲ್ಲಾ ಅಡಿಗೆ ಸಾಮಾನುಗಳನ್ನು ಅಡಿಗೆ ಮಾಡುವುದರ ಜೊತೆಗೆ ಸೇರಿಸಿಕೊಳ್ಳುವುದು.

**ಸರಕು ಕಳುಹಿಸುವ ಕ್ರಮ :**

ಮೃತಪಟ್ಟ ಮನೆಯವರಿಗೆ ಮೃತಪಟ್ಟವರ ಹೆಸರಿನಲ್ಲಿ ನಡೆಯುವ ಶುದ್ಧ ಉತ್ತರ ಕ್ರಿಯೆಗಳಲ್ಲಿ ಖರ್ಚು ವೆಚ್ಚಗಳಲ್ಲಿ ಹೆಚ್ಚಿನ ತ್ರಾಸದಾಯಕವಾಗದಿರಲಿ ಎಂದು ಸಹಾಯ ರೂಪದಲ್ಲಿ ಕಳುಹಿಸುವ ಒಂದು ಕಾಣಿಕೆ. 'ಯಮನ ಬಿಟ್ಟಿ ಕೆಲಸ ಎಲ್ಲರೂ ಸೇರಿ ಮಾಡಿ' ಎಂದು ಹಿರಿಯರು ಹೇಳಿದ ಮಾತಿಗೆ ಇದು ಸಾಕ್ಷಿ. ಸರಕಿನಲ್ಲಿ ಬೆಳ್ತಿಗೆ 3 ರಿಂದ 5 ಸೇರು, ಕುಸಲಕ್ಕಿ 3 ರಿಂದ 5 ಸೇರು, ತೆಂಗಿನಕಾಯಿ 3 ರಿಂದ 5, ಬಾಳೆಗೊನೆ, ಹುರುಳಿ, ಒಂದು ಕುಂಬಳಕಾಯಿ, ಅಕ್ಕಿ ಹುಡಿ, ಈರುಳ್ಳಿ, ಕೊತ್ತಂಬರಿ, ಎಲೆ, ಅಡಿಕೆ ಮುಂತಾದ (ಸಾಸುವೆ, ಬೆಳ್ಳುಳ್ಳಿ ಬಿಟ್ಟು) ಎಲ್ಲಾ ವಸ್ತುಗಳನ್ನು ಕೊಟ್ಟ ಹೆಣ್ಣು ಮಕ್ಕಳು ಸಮೀಪದ ಬಂಧುಗಳು, ನೆರೆಕರೆಯವರು ಈ ಕ್ರಮವನ್ನು ಹೆಚ್ಚಾಗಿ ಪಾಲಿಸುವರು.

**ದೂಪೆಯ ಅಲಂಕಾರ : (ಚಪ್ಪರ ಹಾಕುವುದು) :**

ಮೂರರ ಶುದ್ಧದಂದು ದೂಪೆಯ ಸುತ್ತ ಸುತ್ತಿದ್ದ ಸರಳಿ ಸೊಪ್ಪನ್ನು ತೆಗೆದು ಸುತ್ತಲೂ ಶುಚಿಗೊಳಿಸಿ ಪುನಃ ಬೇರೆ ಸರಳಿ ಸೊಪ್ಪು ಸುತ್ತಿ ದೂಪೆಯ ನಾಲ್ಕು ಮೂಲೆಗಳಿಗೆ ಒಂದೊಂದು ಚಿಕ್ಕ ನಾಲ್ಕು ಕಂಬಗಳನ್ನು ನೆಟ್ಟು ಅದಕ್ಕೆ ನಾಲ್ಕು ಬಾಳೆಯ ಕಂದುಗಳನು ಕಟ್ಟಿ ತಳಿರುತೋರಣದಿಂದ ಅಲಂಕರಿಸುವುದು. ದೂಪೆಯ ಮೆಟ್ಟಿಲು ಇರುವ ಬಡಗು ಭಾಗದಲ್ಲಿ ತೆಗೆದುಕೊಂಡಿರುವಂತೆ ಬಾಗಿಲನ್ನು ಇಡುವುದು. ನಂತರ ಮೂರು ನಾಲ್ಕು ಅಡಿಗಳಷ್ಟು ಅಂತರ ಬಿಟ್ಟು ಇನ್ನೊಂದು ಬೇಲಿ ಮಾಡುವುದು. ಇದಕ್ಕೂ ಮಾವಿನ ಸೊಪ್ಪಿನಿಂದ ತೋರಣ ಕಟ್ಟುವುದು. ಒಳ ಅಂಕಣವು ಕುಟುಂಬದವರಿಗೆ ಮಾತ್ರ ದೂಪೆಗೆ ಮುತ್ತು ಬರುವುದಕ್ಕೆ ಇರುವ ಸ್ಥಳ. ಹೊರ ಅಂಕಣವು ಕೊಟ್ಟ ಹೆಣ್ಣುಗಳು, ಊರವರು, ನೆಂಟರಿಷ್ಟರು ಮತ್ತು ಎಲ್ಲಾ ಇತರರಿಗೂ ಇರುವ ಅಂಕಣ. ಹೊರ ಅಂಕಣಕ್ಕೂ ನೇರ ಬಾಗಿಲು ಇರಬೇಕು. ಒಳ ಅಂಕಣಕ್ಕೆ ಕುಟುಂಬದವರಲ್ಲದೆ ಇತರರು ಬರುವಂತಿಲ್ಲ.

**ಜಾಲಗೂಡು ಮಾಡುವುದು :**

ಜಾಲಗೂಡು ಎಂದರೆ ದೂಪೆಗೆ ಪೊಂಗಾರೆ ಮರದಿಂದ ಸತ್ತವರಿಗಾಗಿ ಮಾಡುವ ಒಂದು ರೀತಿಯ ಮನೆ. ದೂಪೆಯ ನಾಲ್ಕು ಭಾಗಗಳಿಗೆ ಪೊಂಗಾರೆಯ ನಾಲ್ಕು ಕಂಬಗಳನ್ನು ನೆಟ್ಟು ಮೇಲ್ಭಾಗ ಚೌಕಟ್ಟಿನಿಂದ ಕೂಡಿಸಿ ಅದೇ ಮರದ ಗಳಗಳನ್ನು ಮಾಡಿ ಅದರದೇ ಹಲಗೆಯನ್ನು ಮಾಡಿದ ತಂತಿಗಳಂತೆ ಮರದ ಅಣಿಗಳಿಂದಲೇ ಹೊಡೆಯುತ್ತಾರೆ. ಮೇಲಿನಲ್ಲಿ ಒಂದು ಮುಗುಳಿ ಮಾಡಿಟ್ಟು ಒಂದು ಪತಾಕೆ (ಬಾವುಟ) ಹಾರಿಸುತ್ತಾರೆ. ಬಡಗು ಭಾಗವನ್ನು ಬಿಟ್ಟು ಉಳಿದ ಭಾಗಕ್ಕೆಲ್ಲಾ ತಳಿರುತೋರಣಗಳಿಂದಲೂ, ಬಣ್ಣದ ಕಾಗದಗಳಿಂದಲೂ ಅಲಂಕರಿಸಿ ಅರಶಿನ ಬಣ್ಣ ಹಚ್ಚಿ ದೂಪೆಗೆ ಸರಿಯಾಗಿ ನಿಲ್ಲಿಸಿರಬೇಕು. ಇದನ್ನು ಹೆಚ್ಚಿನ ಭಾಗ ಬಡಗಿಗಳಿಂದಲೇ ಮಾಡಿಸುತ್ತಾರೆ. ಇದನ್ನು ಹಿಂಗಾರ ಹೂವಿನಿಂದ ಅಲಂಕರಿಸುತ್ತಾರೆ. ನೋಡುವುದಕ್ಕೆ ಇದು ಬಹಳ ಸುಂದರವಾಗಿರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಕ್ರಮವು ಹೆಚ್ಚು ಪ್ರಚಲಿತವಾಗಿರುತ್ತವೆ.

**ಶುದ್ಧ :**

ಇದು ಮೃತನ 5ನೇ ದಿನದಿಂದ ಹಿಡಿದು 11ನೇ ದಿನದವರೆಗೂ ಮಾಡುವರು. ಈ ದಿನವೇ ಮೊದಲು ದೂಪೆಯ ಅಲಂಕರವಾಗುತ್ತಿದ್ದಂತೆ ಮನೆಗೆ ಕ್ಷೌರಿಕ, ಮಡಿವಾಳ ಬಂದಿರುತ್ತಾರೆ. ಊರಿನವರು, ಪುಣ್ಯಾರ್ಚನೆ ತಂದಿರುತ್ತಾರೆ. ಕ್ಷೌರಿಕನು ಕುಟುಂಬದವರ

ಮತ್ತು ಇಷ್ಟಪಟ್ಟ ಬಂಧುಗಳ ತಲೆ ಕೂದಲು, ಗಡ್ಡ, ಮೀಸೆ ಇತ್ಯಾದಿ ತೆಗೆಯುತ್ತಿರುತ್ತಾನೆ. ಕಿರಿಯರು ಮೃತರಾದರೆ ಹಿರಿಯರು ಮೀಸೆ, ಗಡ್ಡ, ತಲೆ ಕೂದಲನ್ನು ಬೋಳಿಸಬಾರದೆಂದು ಹಿಂದಿನಿಂದ ನಡೆದುಬಂದ ಪದ್ಧತಿ.

ಕುಂಟಿಗೆ ನಿಂತವನನ್ನು ಮನೆ ಮೆಟ್ಟಿಲಿನಲ್ಲಿ ಮೊಣಕಾಲು ಊರಿ ಕುಳ್ಳಿರಿಸಿ ಒಂದು ತೆಂಗಿನ ಕಾಯಿಯನ್ನು ಒಡೆದು ಅದರ ನೀರನ್ನು ಗಡ್ಡ, ತಲೆಗೆ ಹಾಕಿ ಒದ್ದೆ ಮಾಡಿ ಗಡ್ಡ, ತಲೆ ಕೂದಲನ್ನು ಬೋಳಿಸತಕ್ಕದ್ದು. ನಂತರ ಕುಂಟಿಗೆಯವನನ್ನು ಮನೆಯ ಸೂರಿನಲ್ಲಿ ತಲೆಬಾಗಿಸಿ ನಿಲ್ಲುವಂತೆ ಮಾಡಿ ಒಂದು ಚೆಂಬು ನೀರು, ಒಂದು ಚಿಕ್ಕ ಕುಕ್ಕೆಯಲ್ಲಿ ಅಕ್ಕಿ ತಂದು ನೀರನ್ನು ಅವನ ತಲೆಗೆ ಹುಯ್ದು ಆ ನೀರು ಬೀಳುವಲ್ಲಿ ಅಕ್ಕಿ ಕುಕ್ಕೆಯನ್ನು ಹಿಡಿದು ಅಕ್ಕಿಯನ್ನು ಒದ್ದೆ ಮಾಡಬೇಕು. ಹೀಗೆ ಒದ್ದೆ ಮಾಡಿದ ಅಕ್ಕಿಯನ್ನು ಒಂದು ಕಂಚಿನ ಬಟ್ಟಲಿಗೆ ಹಾಕಬೇಕು. ನಂತರ ಶವ ಮಲಗಿದ ಸ್ಥಳದಲ್ಲಿ ಒಂದು ಮಣೆಯನ್ನು ಇಟ್ಟು ಅದರ ಮೇಲೆ ಮಡಿ ಬಟ್ಟೆಯನ್ನು ಹಾಕಿ ಈ ಕಂಚಿನ ಬಟ್ಟಲನ್ನು ಬಟ್ಟೆಯ ಮೇಲೆ ಇಡಬೇಕು. ಆ ಬಟ್ಟಲಿಗೆ ದೀಪದ ಬತ್ತಿ, ಗಂಧದ ಕಡ್ಡಿಯನ್ನಿಟ್ಟು ಒಂದು ಬಾಳೆಲೆಯಲ್ಲಿ ಅರಶಿಣದ ಹುಡಿ (ಬಾಳೆ ಎಲೆಯನ್ನು ಮಗುಚಿ ಹಿಂಭಾಗದಲ್ಲಿ ಕಟ್ಟಬೇಕು. ಏಕೆಂದರೆ ಅದು ಅಶುಭ ಕಾರ್ಯವಾದುದರಿಂದ)ಯನ್ನು ಕಟ್ಟಿಡಬೇಕು. ಅಲ್ಲದೆ ಮೃತನು ಸತ್ತ ದಿವಸ ಆತನಿಗೆ ಒಡೆದ ತೆಂಗಿನ ಕಾಯಿಯ ಒಂದು ಭಾಗವನ್ನು ಊರು ಕುಂಟಿಗೆಯವನ ಹಸ್ತ ಕೊಟ್ಟು ಅದನ್ನು ಆತ ತೆಗೆದಿರುವ ಕ್ರಮವಿದೆ. ಆ ತೆಂಗಿನಕಾಯಿಯನ್ನು ಚಿಕ್ಕ ಚಿಕ್ಕ ಹೋಳುಗಳನ್ನಾಗಿ ಮಾಡಿ ಅದನ್ನು ಒಂದು ಬಾಳೆ ಎಲೆಯಲ್ಲಿ ಕಟ್ಟಬೇಕು. ಎಲ್ಲಾ ಸಾಮಾನುಗಳನ್ನು ಅಕ್ಕಿ ತುಂಬಿದ ಬಟ್ಟಲಿನಲ್ಲಿಟ್ಟು ಹಾಸಿದ ಬಟ್ಟೆಯಲ್ಲಿ ಬಟ್ಟಲನ್ನು ಕಟ್ಟತಕ್ಕದ್ದು. ತದನಂತರ ಕುಂಟಿಗೆದಾರನು ಮನೆಯವರು ಹಾಗೂ ಊರು ಕುಂಟಿಗೆದಾರನು ಸೇರಿ, ಆ ಬಟ್ಟಲಿಗೆ 3 ಸುತ್ತು ಅಪ್ರದಕ್ಷಿಣೆ ಬರತಕ್ಕದ್ದು ಸುತ್ತು ಬಂದ ನಂತರ ಊರು ಕುಂಟಿಗೆದಾರನು ಈ ಬಟ್ಟಲನ್ನು ಮನೆಯ ಕುಂಟಿಗೆಯವನ ಎಡದ ಭುಜದ ಮೇಲಿಡತಕ್ಕದ್ದು. ಅಕ್ಕಿ ಬಟ್ಟಲನ್ನು ಹೊತ್ತ ಕುಂಟಿಗೆದಾರ, ಮನೆಯವರು ನೆರದಿರತಕ್ಕ ಗಂಡಸರು, ಹೆಂಗಸು, ಮಕ್ಕಳು ಎಲ್ಲರೂ ದೂಪೆಯ ಹತ್ತಿರ ಹೋಗುವರು. ಹೋಗುವಾಗ ಮನೆಯಲ್ಲಿ ಮಾಡಿದ ಅಡುಗೆ, ತಿಂಡಿ, ಮದ್ಯ ಇತ್ಯಾದಿ ಎಲ್ಲಾ ತಿಂಡಿ ತಿನಿಸುಗಳನ್ನು ಅಲ್ಪ ಸ್ವಲ್ಪ ತೆಗೆದುಕೊಂಡು ಹೋಗುತ್ತಾರೆ. ಕುಂಟಿಗೆಯವನು ಹೊತ್ತ ಬಟ್ಟಲನ್ನು ದೂಪೆಯ ಮೇಲಿಟ್ಟು ಶವಸಂಸ್ಕಾರಕ್ಕೆಂದು ಇಟ್ಟುಕೊಂಡಿದ್ದ ಬಟ್ಟೆಯ ತುಂಡನ್ನು ದೂಪೆಯ ಮೆಟ್ಟಲಿನ ಸಮೀಪ ಹಾಸಿ ಅದರ ಮೇಲೆ ಮೊಣಕಾಲೂರಿ ಕುಳಿತುಕೊಳ್ಳಬೇಕು. ಬಟ್ಟಲಿನ ಬಟ್ಟೆ ಗಂಟನ್ನು ಬಿಚ್ಚಿ ದೂಪೆಯ ಮೇಲೆ ಬಾಳೆ ಎಲೆಯನ್ನು ಹಾಕಿ ಅದರ ಮೇಲೆ ಬಟ್ಟಲಿನಲ್ಲಿದ್ದ ಅರ್ಧದಷ್ಟು ಅಕ್ಕಿಯನ್ನು ಹಾಗೆಯೇ ಇಡತಕ್ಕದ್ದು. ಮಿಶ್ರಣದ

ಅಕ್ಕಿಯನ್ನು ದೂಪೆಯ ಮೇಲೆ ಹಾಕಿದ ನಂತರ ದೀಪ ಧೂಪಾದಿಗಳು, ಎಳನೀರು, ಮನೆಯಿಂದ ತಂದ ಎಲ್ಲಾ ತಿಂಡಿ ಪದಾರ್ಥಗಳನ್ನು ದೂಪೆಯ ಸುತ್ತಲು ಇಡುವರು. ಅನಂತರ ಮನೆಯ ಕುಂಟಗೆದಾರನ ಎಡ ಭುಜದ ಮೇಲೆ ಅರಶಿಣ ಮಿಶ್ರಣದ ಬಟ್ಟಲನು ಇಟ್ಟು ಕುಟುಂಬಸ್ಥರೆಲ್ಲರೂ ಎಡಗೈಯಲ್ಲಿ ಚೆಲ್ಲುತ್ತಾ 'ನಾರಾಯಣ ನಾರಾಯಣ' ಎಂದು ಹೇಳುತ್ತಾ ದೂಪೆಗೆ ಮೂರು ಸುತ್ತು ಅಪ್ರದಕ್ಷಿಣೆ ಬರುವರು. ಉಳಿದವರು ಊರು, ನೆರೆಕರೆಯವರು, ನೆಂಟರು ಬಿಳಿ ಅಕ್ಕಿಯನ್ನು ಹಾಕಿ ಶರಣು ಮಾಡುವರು.

ಕುಂಟಿಗೆದಾರನು ಕಂಚಿನ ಬಟ್ಟಲನ್ನು ದೂಪೆಯ ಕೆಳಭಾಗದ ಮೆಟ್ಟಲು ಎದುರಿನಲ್ಲಿ ಮಗುಚಿ ಇಟ್ಟು ಅದರ ಎದುರಿನಲ್ಲಿ ಕುಂಟಿನವಸ್ತ್ರ ಕೆಳಗೆ ಹಾಸಿ ಅದರ ಮೇಲೆ ಮೊಣಕಾಲೂರಿ ಕುಳಿತು ಎರಡು ಕೈಗಳನ್ನು ತಲೆಯ ಹಿಂಬದಿಗೆ ಕಟ್ಟಿ ಹಿಡಿದು ಮೂರು ಬಾರಿ 'ಸ್ವರ್ಗಕ್ಕೆ ಹೋಗು' ಎಂದು ತಲೆಯನ್ನು ಬಗ್ಗಿಸಿ ಕಂಚಿನ ಬಟ್ಟಲಿಗೆ ಮುಟ್ಟಿಸಿ ನಮಸ್ಕರಿಸಬೇಕು. ಮೃತರ ಎಲ್ಲಾ ಗಂಡು ಮಕ್ಕಳು ಈ ರೀತಿಯಾಗಿ ಶರಣು ಮಾಡಬೇಕು.

**ಸ್ವರ್ಗ ಸಲ್ಲಿಸುವ ಕ್ರಮ :**

ಕುಂಟಿಗೆದಾರ ಮತ್ತು ಮನೆಯವರು ಶರಣು ಮಾಡಿದ ನಂತರ ಸತ್ತವರ ಸರಿಯಾದ ಪರಿಚಯ ಇರುವವರೊಬ್ಬರು ಈ ಕೆಳಗಿನಂತೆ ಹೇಳುವರು. 'ಬ್ರಹ್ಮಲಿಪಿಯಂತೆ ಅವರ ಮಾತಾಪಿತ್ರರಸುಪುತ್ರ / ಸುಪುತ್ರಿಯಾಗಿ ಹುಟ್ಟಿ ಬಾಲಲೀಲೆಗಳಿಂದ ಅವರ ಕಣ್ಮಣಿಯಾಗಿ ಬೆಳೆದೆ. ನಂತರ ಗುರುಕುಲವನ್ನು ಸೇರಿ ತಕ್ಕ ವಿದ್ಯಾಭ್ಯಾಸವನ್ನು ಪಡೆದೆ. ಪ್ರಾಪ್ತ ವಯಸ್ಸಿಗೆ ಬರುತ್ತಲೆ ಪತಿ / ಸತಿಯನ್ನು ವರಿಸಿದೆ. (ಇಲ್ಲಿ ಅವರ ಹೆಸರು ಹೇಳಿ ಅವನ / ಅವಳ ಪರಿಚಯ ಹೇಳಬೇಕು. ಅಲ್ಲದೆ ಕೆಲವೊಂದು ಅವರ ಗತವೈಭವ ಚರಿತ್ರೆಯನ್ನು ಹೇಳಬೇಕು) ಮಕ್ಕಳನ್ನು, ಮೊಮ್ಮಕ್ಕಳನ್ನು ಪಡೆದೆ ಮನೆಗೆ ಬಂದವರಿಗೆ ಹೊಟ್ಟೆಗೆ ಅನ್ನ ಕೊಟ್ಟೆ, ತಲೆ ನೋಡಿ ಎಣ್ಣೆ ಕೊಟ್ಟೆ, ಮೈ ನೋಡಿ ಬಟ್ಟೆ ಕೊಟ್ಟೆ, ಸರ್ವ ವಿಧಗಳಿಂದಲು ದಾನ ಧರ್ಮಗಳನ್ನು ಮಾಡಿ ಕೀರ್ತಿ ಶ್ರೇಷ್ಠವಾಗಿ ಬಾಳಿ ಬದುಕಿದೆ. ಆದರೆ ಇಂದಿಗೆ ಚಿಗುರೆಲೆ ಕಾಯಿ ಎಲೆಯಾಗಬೇಕು. ಕಾಯಿ ಎಲೆ ಹಣ್ಣೆಲೆಯಾಗಬೇಕು. ಹಣ್ಣೆಲೆ ಉದುರಲೇಬೇಕು ಎನ್ನುವ ಸೃಷ್ಟಿ ನಿಯಮದಂತೆ ಮಕ್ಕಳನ್ನು, ಬಂಧುಗಳನ್ನು ಅಷ್ಟೈಶ್ವರ್ಯವನ್ನು ಬಿಟ್ಟು ಜೀವಮಾನದಿಂದ ಅಂತ್ಯಗೊಂಡೆ. ನಾಡನ್ನು ಬಿಟ್ಟು ಕಾಡನ್ನು ಸೇರಿದೆ. ಆತ್ಮವು ಪರಮಾತ್ಮನಲ್ಲಿ ಮಿಲಿನವಾಯಿತು.

ನೀನು ಪರಮಾತ್ಮನ ವಶವಾದ ಕೂಡಲೇ ಸರ್ವರಿಗೂ ತಿಳಿಯಲಿ ಎಂದು, ಆತ್ಮ ದೇವರಲ್ಲಿ ಐಕ್ಯವಾಗುವ ಸೂಚನೆಯಂತೆಯು ಜೋಡು ಗುಂಡನ್ನು ಆಕಾಶಕ್ಕೆ ಹಾರಿಸಿ ನೆರೆಕರೆಯವರು ಬಂದು ತುಳಸಿ ನೀರನ್ನು ಕೊಟ್ಟರು. ಊರಿನವರು ದಹನಕ್ಕೆ ಬೇಕಾದಷ್ಟು ಕಟ್ಟಿಗೆಯನ್ನು ತಯಾರು ಮಾಡಿದರು. ನಂತರ ಶಾಸ್ತ್ರೋಕ್ತವಾಗಿ ಮೃತ ದೇಹವನ್ನು ಸ್ಥಾನ ಮಾಡಿಸಿ ಮಡಿಯನ್ನು ಉಡಿಸಿ ಮತ್ತು ಹೊದಿಸಿ ಚಟ್ಟದ ಮೇಲಿರಿಸಿ ತಲೆ ಕಡೆಯಿಂದ ಮನೆಯವರು, ಕಾಲು ಕಡೆಯಿಂದ ಊರವರು ಹೊತ್ತುಕೊಂಡು ಹೋಗಿ ತೆಂಕು ಬಡಗು ಆಗಿ ಕಾಟದಲ್ಲಿ ಇಟ್ಟು ತಲೆ ಕಡೆಯಿಂದ ಮನೆಯವರು, ಕಾಲು ಕಡೆಯಿಂದ ಊರಿನವರು ಬೆಂಕಿ ಕೊಟ್ಟು ಉರಿಸಿದರು. ಅಂದಿನಿಂದ ನಿನ್ನ ಪವಿತ್ರ ದೇಹವು ಭೂಮಿಗೆ ಗೊಬ್ಬರವಾಗಿ ಆಕಾಶಕ್ಕೆ ಹೊಗೆಯಾಗಿ ಪರಿವರ್ತನೆಯಾಯಿತು. ಇಂದು ನೀನು ಇಹಲೋಕವನ್ನು ಬಿಟ್ಟು 11ನೇಯ ದಿನವಾಗಿದೆ. ಹಾಗೆಯೇ ನಾವೆಲ್ಲರೂ ನಿನ್ನ ಆತ್ಮಕ್ಕೆ ಶಾಂತಿಯನ್ನು ಕೋರಲಿಕ್ಕಾಗಿ ಇಲ್ಲಿ ಬಂದು ನೆರೆದಿದ್ದೇವೆ. ಸಂಸಾರ ನೌಕೆಯನ್ನು ನಡೆಸುತ್ತಾ ಬಂದಂತೆ ನಿಮಗೆ ವಯಸ್ಸಾಯಿತು. ಕಾಯಿಲೆಯಲ್ಲಿ ಮಲಗಿದಿರಿ. ಬ್ರಾಹ್ಮಣರಲ್ಲಿ ಶಾಸ್ತ್ರ ಕೇಳಿಸಲಾಯಿತು. ವೈದ್ಯರಿಂದ ಔಷಧಿ ಮಾಡಿಸಲಾಯಿತು. ಯಾವುದರಿಂದಲೂ ಗುಣವಾಗಲಿಲ್ಲ. ನಿನ್ನ ಪ್ರಾಣ ವಾಯು ಮೃತ್ಯುವಿನಿಂದಲೇ ಅಥವಾ ಅಪಮೃತ್ಯುವಿನಿಂದಲೋ ಈ ದೇಹ ಬಿಟ್ಟೋಯ್ತು ಇನ್ನು ಮುಂದೆಯೂ ಕಷ್ಟಗಳಿಗೆ ಸಿಕ್ಕದೆ ಪರಮಾತ್ಮನಲ್ಲಿ ಐಕ್ಯಗೊಳ್ಳು ಎಂದು ಹರಸುತ್ತೇವೆ. ಅಲ್ಲದೆ ಮುಂದಿನ ಜನ್ಮದಲ್ಲಿ ಅಗಸನ ಕಲ್ಲಾಗದೆಯೂ, ಗಾಣಿಗರ ಎತ್ತಾಗದೆಯೂ, ಹಾದಿ ಬದಿಯ ಮರವಾಗದೆಯೂ, ಬ್ರಾಹ್ಮಣನ ಆಳಾಗದಂತೆಯೂ ಇರು. ಈ ಜನ್ಮವನ್ನು ತೊರೆದು ಬಾಳೆ ದಿಂಡಿನ ಪಾಲದಲ್ಲಿ ನೂಲಿನ ಕೈತಾಂಗಿನಲ್ಲಿ ಸ್ವರ್ಗಕ್ಕೆ ಹೋಗು. ಶ್ರೀಮನ್ನಾರಾಯಣ ಬಲಭಾಗದಲ್ಲಿ ಸಂಪಿಗೆಯ ಮರವಾಗಿ ಹುಟ್ಟು ಎಂದು ನಿನ್ನ ಮನೆಯವರು, ಊರಿನವರು, ನೆಂಟರಿಷ್ಟರು ಹಾಗೂ ಸರ್ವರು ಹಾರೈಸುತ್ತೇವೆ. (ಇಲ್ಲಿ ಇಷ್ಟಪಟ್ಟು ಹೆಸರಿನಿಂದ ಕರೆಯಬೇಕು) 'ಸ್ವರ್ಗಕ್ಕೆ ಹೋಗು' 'ಸ್ವರ್ಗಕ್ಕೆ ಹೋಗು' ಎಂದು 3 ಬಾರಿ ಹೇಳಿ ಅಕ್ಕಿ ಹಾಕುವುದು. ನಂತರ ಒಂದೆರಡು ನಿಮಿಷ ದೂಪೆಗೆ ಬೆನ್ನು ಹಾಕಿ ಹಿಂತಿರುಗಿ ನಿಲ್ಲುವುದು. (ದೂಪೆಗೆ ಇಟ್ಟ ತಿಂಡಿ-ತಿನಿಸು ಮದ್ಯ, ಇತ್ಯಾದಿಗಳನ್ನು ಮೊದಲಾಗಿ ಮಡಿವಾಳನು ಅನಂತರ ಕ್ಷೌರಿಕ, ವಾದ್ಯದವರು ಮಾತ್ರ ತೆಗೆದುಕೊಳ್ಳಬಹುದಲ್ಲದೆ, ಇನ್ನಿತರರು ಯಾರೂ ಸೇವಿಸಕೂಡದು.)

ಎಲ್ಲರೂ ಹಿಂತಿರುಗಿದ ನಂತರ ಮನೆಯವರು, ಕುಟುಂಬದವರೆಲ್ಲರೂ ತಣ್ಣೀರಿನಲ್ಲಿ ಸ್ನಾನ ಮಾಡಿ (ಸಾಬೂನು ಹಾಕಬಾರದು) ಮಡಿವಾಳನಿಂದ ಮಡಿಬಟ್ಟೆ ಕೇಳಿ ಉಟ್ಟುಕೊಳ್ಳತಕ್ಕದ್ದು. ಅಂದು ನೆರೆದಿರತಕ್ಕ ಎಲ್ಲರೂ ಕೈ ಕಾಲು ಮುಖ ತೊಳೆದು ತಲೆಗೆ ಸ್ವಲ್ಪ ನೀರು ಸಿಂಪಡಿಸಿಕೊಳ್ಳಬೇಕು.

ಅನಂತರ ಮನೆಯ ಮುಂದೆ ಅಂಗಳದಲ್ಲಿ ಮನೆಗೆ ಮುಖ ಮಾಡಿ ಮನೆಯವರು ಸಾಲಾಗಿ ನಿಲ್ಲಬೇಕು. ಊರಿನವರು ಮತ್ತು ನೆಂಟರಿಷ್ಟರು ಸೂರಿನ ಪಕ್ಕದಲ್ಲಿ ಮನೆಗೆ ಬೆನ್ನು ಹಾಕಿ ಸಾಲಾಗಿ ನಿಲ್ಲುವರು. ಹೀಗೆ ಎರಡು ಕಡೆಯವರು ಸಾಲಾಗಿ ನಿಂತ ನಂತರ ಮಡಿವಾಳನು ಮೊದಲು ಊರಿನವರಿಗೆ ಆತನು ತಂದಿರತಕ್ಕ ಖಾರ ನೀರನ್ನು (ಬಟ್ಟೆ ಒಗೆಯುವ ಸೋಡಾ ಪುಡಿಯನ್ನು ನೀರಿನಲ್ಲಿ ಮಿಶ್ರ ಮಾಡಿದ ನೀರಿಗೆ ಖಾರ ನೀರೆಂದು ಹೆಸರು) ಮಾವಿನ ಎಲೆಯಲ್ಲಿ ಮೊದಲು ಕಾಲಿಗೆ ಅನಂತರ ನಡುಭಾಗಕ್ಕೆ ತದನಂತರ ಎದೆ ಮಟ್ಟಕ್ಕೆ ಎಲ್ಲರಿಗೂ ಚಿಮುಕಿಸುವನು. ಖಾರ ನೀರು ಚಿಮುಕಿಸಿದ ಪ್ರಕಾರ ಅಕ್ಕಿಯನ್ನು ಮೂರು ಬಾರಿ ಕಾಲಿಗೆ ನಡುಭಾಗಕ್ಕೆ ಎದೆ ಭಾಗಕ್ಕೆ ಎರಚುವನು. ನಂತರ ಮಡಿವಾಳನು ಊರಿನವರಿಗೆ ಖಾರ ನೀರು, ಅಕ್ಕಿ ಎರಚಿದ ಪ್ರಕಾರ ಮನೆಯವರಿಗೂ ಎರಚುವರು. ಆ ಪುಣ್ಯ ನೀರನ್ನು ತಲೆಯ ಮೇಲೆ ಊರಿನವರು ಚಿಮುಕಿಸುವರು. ತದನಂತರ ಊರಿನವರೊಬ್ಬರು ದೂಪ ಮಿಶ್ರಿತ ಕೆಂಡದ ತಟ್ಟೆ ಮತ್ತು ಸವೆದ ಗಂಧ ಹೂಗಳನ್ನು ಒಂದು ಬಾಳೆ ಎಲೆಯಲ್ಲಿಟ್ಟು ಎಲ್ಲರಿಗೂ ಅಂದರೆ ಮೊದಲು ಊರಿನವರಿಗೂ ತದನಂತರ ಮನೆಯವರಿಗೂ ತೋರಿಸುತ್ತಾ ಬರುವರು.

ಮನೆಯ ಹೊರಭಾಗದಲ್ಲಿ ಶಾಸ್ತ್ರಕ್ರಿಯೆಗಳು ನಡೆಯುತ್ತಿದ್ದಂತೆ ಊರಿನ ಯಾರಾದರೂ ಇಬ್ಬರು ಯಾ ಮೂವರು ಮನೆಯ ಒಳಗೆ ಹೋಗಿ ಮನೆಯನ್ನೆಲ್ಲಾ ಗುಡಿಸಿ, ಸಗಣಿ ನೀರು ಹಾಕಿ ದೇವರ ದೀಪ ಹಚ್ಚುತ್ತಾರೆ. ಅನಂತರ ಮಡಿವಾಳನು ಒಂದು ಬಿಳಿ ಬಟ್ಟೆಯನ್ನು ಮನೆಯ ಮೆಟ್ಟಲಿಗೆ ಹಾಕುತ್ತಾನೆ. ಎಲ್ಲರೂ ಆ ಬಟ್ಟೆಯನ್ನು ಮೆಟ್ಟಿ ಒಳಗೆ ಹೋಗಿ ದೇವರ ದೀಪಕ್ಕೆ ಶರಣು ಮಾಡಿ ಅಕ್ಕಿ ಹಾಕುವರು.

ಶುದ್ಧ ಕ್ರಮ ಕಳೆಯುವವರೆಗೆ ಸೂತಕದ ಮನೆಯವರು ಅಡುಗೆ ಮಾಡಕೂಡದು ಬಂದ ಅತಿಥಿಗಳಿಗೆ ಊಟ ಕೊಡಿಸಲು ಊರಿನವರು, ನೆಂಟರು ಮೊದಲಾದವರು ಸೇರಿ ಹೊರಗಡೆ ಅಡುಗೆ ಮಾಡಬೇಕು. ಶುದ್ಧ ಕ್ರಿಯೆಯಲ್ಲಿ ಮಾಂಸ ಮುಂತಾದವುಗಳನ್ನು ಉಪಯೋಗಿಸಕೂಡದು. ಅದಕ್ಕಾಗಿ ಪಾಯಸ ಮುಂತಾದ ಸಿಹಿ ಪದಾರ್ಥ, ಅನ್ನ, ಮೇಲೋಗರ ಸಾರು ಮಾಡತಕ್ಕದ್ದು.

ಆ ದಿನದ ಸರ್ವ ಕೆಲಸ ಕಾರ್ಯಗಳು ಊರಿನವರು ಹಾಗೂ ನೆಂಟರಿಷ್ಟರು ಮಾಡಬೇಕಾಗಿರುವುದರಿಂದ ಮನೆಯ ಮುಂಭಾಗದ ಅಂಗಳದಲ್ಲಿ ಎರಡು ಪಂಕ್ತಿಯಾಗಿ ಅಂದರೆ ಮನೆಯವರು ಮನೆಗೆ ಎದುರಾಗಿಯೂ, ಊರಿನವರು ಮನೆಗೆ ಬೆನ್ನು ಮಾಡಿಯೂ ಕುಳಿತುಕೊಳ್ಳತಕ್ಕದ್ದು. ಸರ್ವರಿಗೂ ಊಟಕ್ಕೆ ಎಲೆ ಕೊಟ್ಟು ಬಡಿಸಿದ ನಂತರ ಕುಂಟಿಗೆದಾರನು ಒಂದು ಚೆಂಬು ನೀರು ಹಿಡಿದು ಎದ್ದು ನಿಂತು ಎಲ್ಲರಿಗೂ

ಕೇಳುವಂತೆ ವಿನಯದಿಂದ ಈ ಕೆಳಗಿನಂತೆ ಹೇಳಬೇಕು. ಮೃತರ ಹೆಸರಿನಲ್ಲಿ ನಾವು ಅಂಬಲಿ ಗಂಜಿ, ತುಂಬೆ ಸೊಪ್ಪಿನ ಸಾರು ಇಕ್ಕಿದ್ದೇವೆ. ತಾವೆಲ್ಲರೂ ಸಂತೋಷದಿಂದ ಊಟ ಮಾಡಿ ಮೃತರ ಆತ್ಮಕ್ಕೆ ಶಾಂತಿ ಕೋರಬೇಕು ಎಂದು ಹೇಳಿದ ನಂತರ ಸರ್ವರೂ ಊಟ ಮಾಡುವುದು. ಊಟ ಮುಗಿಯುತ್ತಾ ಬಂದಂತೆ ಅಂದರೆ ಊಟಕ್ಕೆ ಕುಳಿತವರು ಏಳುವ ಮೊದಲು ಮನೆಯಿಂದ ಕೊಟ್ಟ ಹೆಣ್ಣು ಮಕ್ಕಳಿದ್ದರೆ ಅವರಲ್ಲಿ ಒಬ್ಬರು ಬಂದು ವೀಳ್ಯದೆಲೆ, ಒಂದು ಅಡಿಕೆ ಪ್ರತಿಯೊಬ್ಬರಿಗೂ ಕೊಡುತ್ತಾ ಹೋಗಬೇಕು. ಇನ್ನೊಬ್ಬಳು ಹಲಸಿನ ಮರದ ಎಲೆಯನ್ನು ಚಮಚ ಆಕಾರದಲ್ಲಿ ಜೊನ್ನೆ ಮಾಡಿ ಒಂದು ಪಾತ್ರೆ ಅಥವಾ ಚೆಂಬಿನಲ್ಲಿ ತೆಂಗಿನ ಎಣ್ಣೆ ಹಾಕಿ ಪ್ರತಿಯೊಬ್ಬರ ತಲೆಗೆ ಎಣ್ಣೆ ಕೊಡುತ್ತಾ ಹೋಗಬೇಕು. ಊಟ ಮಾಡುವ ಎಲೆ ಅಡಿಕೆ ಮತ್ತು ಎಣ್ಣೆ ಕೊಡುವ ಕ್ರಮವು ಏಕೆಂದರೆ ಮೃತನು ಜೀವಂತರಿದ್ದಾಗ ಸಾಕಷ್ಟು ಐಶ್ವರ್ಯ ಗಳಿಸಿರುತ್ತಾನೆ. ಹಲವೊಮ್ಮೆ ಅನ್ಯಾಯದ ಗಳಿಕೆಯು ಸೇರಿರುತ್ತದೆ. ಆದರೆ ಆತನು ಸಾಯುವಾಗ ಸರ್ವಸ್ವವನ್ನು ಬಿಟ್ಟು ಹೋಗುತಾನೆ. ಆತನು ಮಾಡಿದ ಪಾಪ ಕರ್ಮಗಳಿಂದ ಮುಂದಿನ ಜನ್ಮದಲ್ಲಿಯಾದರೂ ಸಂಕಟಕ್ಕೆ ಗುರಿಯಾಗದೆ ಮೃತನ ಆತ್ಮಕ್ಕೆ ಶಾಂತಿಸಿಗಲೆಂಬ ಉದ್ದೇಶಕ್ಕಾಗಿ ಹೊಟ್ಟೆಗೆ ಊಟ, ತಲೆಗೆ ಎಣ್ಣೆ, ಬಾಯಿಗೆ ತಾಂಬೂಲವನ್ನು ಕೊಡುವುದು ಹಿಂದಿನಿಂದಲೂ ನಡೆದುಬಂದ ಪದ್ಧತಿ.

ಶುದ್ಧ ಮತ್ತು ತಿಥಿ ಕರ್ಮಾಂತರವು ಹನ್ನೊಂದನೆಯ ದಿನದಂದು ಆಚರಿಸುವುದು. ಹಿಂದಿನಿಂದಲೂ ನಡೆದು ಬಂದ ನಿಯಮ. ಆದರೆ ಹನ್ನೊಂದು ದಿನಗಳವರೆಗೆ ಅಸ್ಪಶ್ಯತೆಯಲ್ಲಿದ್ದರೆ ಕೆಲಸ ಕಾರ್ಯಗಳಿಗೆ ತಿರುಗಾಟಕ್ಕೆ ತುಂಬಾ ತೊಂದರೆಯಾಗುವುದರಿಂದ ಶುದ್ಧವನ್ನು ಮೊದಲು ಮುಗಿಸಿ ತಿಥಿ ಕರ್ಮಾಂತರವನ್ನು ಮಾತ್ರ ಹನ್ನೊಂದನೆಯ ದಿನದಂದು ಏರ್ಪಡಿಸುತ್ತಾರೆ.

ಕೆಲವು ಸಂದರ್ಭಗಳಲ್ಲಿ ಜೀವನ ವ್ಯವಸ್ಥೆ ಆರ್ಥಿಕ ಮಟ್ಟ ಕೆಲಸ ಕಾರ್ಯಗಳ ತೊಂದರೆಯಲ್ಲಿರುವವರು ಬೇರೆ ಬೇರೆ ಖರ್ಚುಗಳನ್ನು ಪೂರೈಸಿಕೊಳ್ಳಲು ಅಸಾಧ್ಯವಿರುವವರು ಹನ್ನೊಂದರಂದೇ ಶುದ್ಧ ಮತ್ತು ತಿಥಿಯನ್ನು ಏರ್ಪಡಿಸುತ್ತಾರೆ. ಆದರೆ ಇನ್ನೂ ಕೆಲವರು ಶುದ್ಧವನ್ನು ಮೊದಲು ಮುಗಿಸಿ ಉತ್ತರಕ್ರಿಯೆಗಳನ್ನು ಹದಿನಾರನೆಯ ದಿನದಂದು ಏರ್ಪಡಿಸುವುದು ಇದೆ. ಏಕೆಂದರೆ ಬೇರೆ ಬೇರೆ ದಿನಗಳಲ್ಲಿ ಆಗುವ ಖರ್ಚುಗಳು, ಅತಿಥಿಗಳು ಬಂದು ಹೋಗುವ ತೊಂದರೆ ಹೀಗೆ ಹಲವಾರು ಆಚರಣೆಗಳು ಎದುರುಗೊಳ್ಳುವುದರಿಂದ ಅವರವರ ಸೌಕರ್ಯಗಳಿಗನುಸಾರವಾಗಿ ಏರ್ಪಡಿಸಿಕೊಳ್ಳುತ್ತಾರೆ.

**ಸಲಾಯಿ ಅಳೆಯುವುದು :**

ಕೈ ಶಾಲೆಯಲ್ಲಿ ಒಂದು ದೀಪ ಹಚ್ಚಿಟ್ಟು ಕುಂಟಿಗೆಯವನು ಬಟ್ಟೆಯನ್ನು ನೆಲಕ್ಕೆ ಹಾಸಿ ಮೊಣಕಾಲು ಉರಿ ಕುಳಿತುಕೊಳ್ಳಬೇಕು. ಮೂರು ಸೇರು ಅಕ್ಕಿಯನ್ನು ಕೆಳಗೆ ಬಟ್ಟೆಗೆ ಸುರಿದು ಕೈಯಿಂದ ಎರಡು ಪಾಲು ಮಾಡಬೇಕು. ಪ್ರತಿ ಪಾಲಿಗೂ ಐದು ಎಲೆ. ಒಂದು ಅಡಿಕೆ ಇಡಬೇಕು. ಕ್ಷೌರಿಕನು ಇನ್ನೊಂದು ಬದಿಯಿಂದಲೂ ಕುಂಟಿಗೆಯವನ ರಟ್ಟೆ ಹಿಡಿದು ಏಳಿಸುವುದು. ಪಾಲು ಮಾಡಿದ ಅಕ್ಕಿ ಮತ್ತು ಮೊದಲೇ ತೆಗೆದಿಟ್ಟ ಕುಂಬಳಕಾಯಿ, ಬಾಳೆಕಾಯಿಯನ್ನು ಮಡಿವಾಳ ಮತ್ತು ಕ್ಷೌರಿಕ ತೆಗೆದುಕೊಳ್ಳುತ್ತಾರೆ. ಇದಕ್ಕೆ ಸಲಾಯಿ ಅಳೆಯುವುದೆಂದು ಹೆಸರು. ಈ ಸಂದರ್ಭದಲ್ಲಿ ಕೆಲವು ಕಡೆ ಕುಂಟಿಗೆ ನಿಂತವನು ಹಣ ಪಡೆದುಕೊಳ್ಳುವನು. ಇನ್ನು ಕೆಲವು ಕಡೆ ಅಗಲು ಹಾಕಿದ ಕಡೆ ಹಣ ಇಡುತ್ತಾರೆ. ಈಗ ಸಾಮಾನ್ಯವಾಗಿ ಇದು ನಿಂತು ಹೋಗಿದೆ.

**ಮೃತರ ತಿಥಿ ಸಮಾರಂಭ (ಬೊಜ್ಜ) :**

ಮೃತರ ಶವ ಸಂಸ್ಕಾರ ನಡೆದ ಐದನೆ ದಿನದಿಂದ ಹಿಡಿದು ಹನ್ನೊಂದನೆಯ ದಿನದ ಒಳಗೆ ಶುದ್ಧ ನಡೆಯಲೇಬೇಕು. ಕೆಲವರು ಅವರವರ ಅನುಕೂಲಕ್ಕಾಗಿ ಹತ್ತನೆ ದಿನ ರಾತ್ರಿ ನೀರು ನೇರಳಿಗೆ ಇಟ್ಟು ಹನ್ನೊಂದನೆಯ ದಿನ ಶುದ್ಧ ಮತ್ತು ದಿನ (ಬೊಜ್ಜ) ಎರಡನ್ನೂ ಮಾಡುವರು. ಶುದ್ಧವನ್ನು ಈ ಮೊದಲೇ ಮಾಡಿ ಮುಗಿಸಿದವರಾದರೆ ಹನ್ನೊಂದನೆಯ ದಿನ ಇಲ್ಲವೆ ಹದಿನಾರನೆಯ ದಿನ ತಿಥಿ (ಬೊಜ್ಜ) ಮಾಡುವರು ತಿಥಿಯು ಮೃತನು ಜೀವಂತವಿದ್ದಾಗ ಬಹಳಷ್ಟು ಜನರೊಂದಿಗೆ ಸಂಪರ್ಕವಿಟ್ಟುಕೊಂಡವರು, ಮೃತರಾದ ನಂತರ ತಮ್ಮೆಲ್ಲ ಬಂಧುಬಳಗವನ್ನು, ನೆಂಟರಿಷ್ಟರನ್ನು, ಊರು ನೆರೆಕರೆಯವರನ್ನು ಕಳೆದುಕೊಂಡಂತೆ ಅವರ ಗಳಿಕೆಯಲ್ಲಿ ಇಲ್ಲವೆ ಅವರಿಗಾಗಿ ಅವರ ಹೆಸರಿನಲ್ಲಿ ಮಕ್ಕಳು, ಮರಿ ಮಕ್ಕಳು ಸೇರಿ ಅವರನ್ನು ಸ್ಮರಿಸಿ ಸರ್ವರಿಗೂ ಅನ್ನದಾನವನ್ನು ಕೊಡುವುದು, ಹಿಂದಿನಿಂದ ನಡೆದು ಬಂದ ಪದ್ಧತಿ. ಇದಕ್ಕೆ ತಿಥಿ ದಿನ, ಬೊಜ್ಜ ಎಂದೆಲ್ಲ ಕರೆಯುವರು.

ತಿಥಿ ಸಮಾರಂಭವು ಬಹಳಷ್ಟು ಸಡಗರದಿಂದ ನಡೆಯುವುದು. ಗೊತ್ತುಪಡಿಸಿದ ದಿನದಂದು ಸರ್ವರನ್ನು ಆಮಂತ್ರಿಸಿ ವಿವಿಧ ರೀತಿಯ ಭಕ್ಷ್ಯ ಭೋಜನವನ್ನು ಸಿದ್ಧಪಡಿಸಿ, ಮೊದಲು ಮೃತರ ಕೋಣೆಯಲ್ಲಿ, ಮೃತರ ಭಾವಚಿತ್ರವಿದ್ದಲ್ಲಿ, ಅದನ್ನು ಮೇಜಿನ ಮೇಲಿಟ್ಟು ಇಲ್ಲವೇ ಅವರು ಮಲಗುವ ಮಂಚದ ಮೇಲಿಟ್ಟು, ಅವರ ಭಾವಚಿತ್ರಕ್ಕೆ ಹೂವಿನ ಹಾರ ಹಾಕಿ ಅದರ ಸುತ್ತಲೂ ಅವರ ನಿತ್ಯ ಉಪಯೋಗದ ವಸ್ತುಗಳಾದ ಉಡುಪು, ಕೈಯ ವಾಚು, ಊರುಗೋಲು, ಕನ್ನಡಕ ಮತ್ತು ಎಲ್ಲಾ ಆಭರಣಗಳನ್ನು ಇಟ್ಟು ಹಣತೆ ಹಚ್ಚಿಟ್ಟು ಭೋಜನಕ್ಕಾಗಿ ಮಾಡಿದ ಎಲ್ಲಾ ತಿಂಡಿ ತಿನಿಸುಗಳ ಎಡೆ

ಹಾಕಿ, ಮುಖ್ಯವಾಗಿ ನೀರುದೋಸೆ, ರೊಟ್ಟಿ, ಕೋಳಿ ಸಾರು ಮುಂತಾದ ನಿತ್ಯ ಉಪಯೋಗಿಸುವ ಆಹಾರವನ್ನು ಎಡೆಗೆ ಬಡಿಸಿ ನಂತರ ಇತರ ಪದಾರ್ಥಗಳನ್ನು ಬಡಿಸುವುದು. ಮದ್ಯ ಸೇವಿಸುವವರಾದರೆ ಮದ್ಯವನ್ನು ಇಡುವರು. ಈ ಎಲ್ಲಾ ಪದಾರ್ಥಗಳನ್ನು ಬಡಿಸುವುದಕ್ಕೆ ಮುಂಚಿತವಾಗಿ ಗಣಪತಿಗೆ ಇಡುವ ಕ್ರಮವನ್ನು ಪಾಲಿಸಬೇಕು.

ತದನಂತರ ಸರ್ವರೂ ಸೇರಿ ಮೃತರ ಆತ್ಮಕ್ಕೆ ಶಾಂತಿಯನ್ನು ಕೋರಿ ಮೃತರನ್ನು ಸ್ಮರಿಸಿ ದೀಪಕ್ಕೆ ಅಕ್ಕಿ ಹಾಕುವರು. ತಿಥಿಗೆ ಬಂದ ನೆಂಟರಿಷ್ಟರು ತಂದ ತಿಂಡಿ ತಿನಿಸುಗಳನ್ನು ಮೃತರಿಗೆ ಬಡಿಸಿದ ಎಡೆಯ ಪಕ್ಕದಲ್ಲಿಟ್ಟು ಅವರು ವಂದಿಸುವರು. ಅತಿಥಿಗಳೆಲ್ಲರನ್ನೂ ಭೋಜನ ಮಾಡುವಂತೆ ನಿವೇದಿಸಿಕೊಳ್ಳುವುದು ಕ್ರಮ. ತಿಥಿ ಭೋಜನದಲ್ಲಿ ಮಾಂಸದ ಅಡುಗೆಯನ್ನು ಏರ್ಪಡಿಸುವುದು ಸಾಮಾನ್ಯ. ಗೌಡರ ಸಂಪ್ರದಾಯದಲ್ಲಿ ಶುದ್ಧ ಕಳೆಯುವವರೆಗೆ ಮದ್ಯ ಮಾಂಸಗಳ ಬಳಕೆ ನಿಷೇಧವಾಗಿದ್ದರೂ ಇದು ಹಿಂದಿನಿಂದಲೂ ನಡೆದು ಬಂದ ಪದ್ಧತಿ. ಇದಾರ ನಂತರ ಮೃತರಿಗೆ ಹದಿನಾರರ ಕೊಲೆಗೆ ಸೇರಿಸುವ ಕ್ರಮವಿರುವುದು.

**ಹದಿನಾರರ ಕೊಲೆಗೆ ಸೇರಿಸುವಿಕೆ :**

ಮೃತನು ಸತ್ತ ಹದಿನಾರನೆಯ ದಿವಸ ಅಕ್ಕಪಕ್ಕದ ನಾಲ್ಕಾರು ಜನರನ್ನು ಮನೆಗೆ ಆಮಂತ್ರಿಸಬೇಕು. ಒಂದು ಹುಂಜ ಕೋಳಿಯನ್ನು ಕೊಂದು ಸಾರು ಮಾಡಬೇಕು. ಜೊತೆಗೆ ನೀರುದೋಸೆ, ರೊಟ್ಟಿ ಮಾಡಬೇಕು. ಅಡುಗೆ ಕೆಲಸ ಮುಗಿದ ನಂತರ ಅಗಲು ಹಾಕುವ ಕೋಣೆಯನ್ನು ಸ್ವಚ್ಛಗೊಳಿಸಿ ಹದಿನೈದು ಚಿಕ್ಕ ಚಿಕ್ಕ ಬಾಳೆ ಎಲೆಯನ್ನು ಸಾಲಾಗಿ ಇಡಬೇಕು. ಇನ್ನೊಂದು ಬಾಳೆ ಎಲೆಯನ್ನು ಸಾಲಿಗಿಂತ ಸ್ವಲ್ಪ ದೂರದಲ್ಲಿ ಹಿಂಭಾಗದಲ್ಲಿಡಬೇಕು. ಒಂದು ಬಟ್ಟಲಿಗೆ ಒಂದೆರಡು ದೋಸೆ, ಒಂದು ರೊಟ್ಟಿಯನ್ನು ಸಣ್ಣಗೆ ಚೂರು ಮಾಡಿ ಕೋಳಿ ಸಾರನ್ನು ಅದಕ್ಕೆ ಹಾಕಿ ಮಿಶ್ರ ಮಾಡಬೇಕು. ತದನಂತರ ಕುಂಟಿಗೆ ನಿಂತವನು ಎಲ್ಲಾ ಬಾಳೆ ಎಲೆಗೆ ಸ್ವಲ್ಪ ಸ್ವಲ್ಪವಾಗಿ ಬಳಸಬೇಕು. ಪ್ರತಿ ಎಲೆಯ ತುದಿಗೆ ಒಂದೊಂದು ಎಣ್ಣೆ ಬತ್ತಿಯನ್ನು ಇಟ್ಟು ಹಚ್ಚಬೇಕು. ಅನಂತರ ಗಂಧದೂಪವನ್ನು ಕೊಟ್ಟು ಎಲ್ಲರಿಗೂ ಸ್ವಲ್ಪ ಸ್ವಲ್ಪ ಅಕ್ಕಿ ಕೊಟ್ಟು ಯಾರಾದರೂ ಹಿರಿಯರೊಬ್ಬರು ಸತ್ತವರ ಗುಣಗಾನವನ್ನು ಹೇಳಿ ಹಿಂದೆ ಸತ್ತವರೊಂದಿಗೆ ನೀನು ಸೇರಿಕೊಂಡು ನಮ್ಮೆಲ್ಲರನ್ನು ರಕ್ಷಿಸು ಎಂದು ಪ್ರಾರ್ಥನೆ ಮಾಡಿ ಹಿಂದೆ ಇಟ್ಟಿದ್ದ ಒಂದು ಎಲೆಯನ್ನು 15 ಎಲೆಯೊಂದಿಗೆ ಸೇರಿಸಬೇಕು. ಆಗ ಮೊದಲು ಸತ್ತವರೊಂದಿಗೆ ಈತನು ಸೇರಿಕೊಳ್ಳುವನೆಂದು ನಂಬಿಕೆ. ಹೀಗೆ ಎಲೆಯನ್ನು ಸೇರಿಸಿದ ನಂತರ ಎಲ್ಲರೂ ಊಟ ಮಾಡಿ ತಾಂಬೂಲ ಸೇವಿಸಿ ಅವರವರ ಮನೆಗೆ ಹೋಗುತ್ತಾರೆ.

**ಪಿಂಡ ಹಾಕುವುದು :**

ಮೃತನಿಗೆ ದೀಕ್ಷೆಗೆ ನಿಂತವನು ಶುದ್ಧದ ದಿನದಂದು ಗಡ್ಡ, ಮೀಸೆ ತಲೆ ಕೂದಲನ್ನು ಬೋಳಿಸಿದ ನಂತರ ಪಿಂಡ ಹಾಕುವವರೆಗೆ ಗಡ್ಡ, ಮೀಸೆ, ತಲೆ ಕೂದಲನ್ನು ತೆಗೆಯಬಾರದು. ಪಿಂಡ ಹಾಕುವುದೆಂದರೆ ಸತ್ತವನಿಗೆ ಮೋಕ್ಷ ಸಿಗಲಿ ಎಂದು ಮಾಡುವ ಕ್ರಮ. ಕಾವೇರಿಯಂತಹ ಪುಣ್ಯ ಕ್ಷೇತ್ರವನ್ನು ಪಿಂಡ ಹಾಕುವ ಸಮಯದಲ್ಲಿ (ಕಾವೇರಿ ಸಂಕ್ರಮಣ) ಪಿಂಡದ ಸಾಮಾನುಗಳನ್ನು ಮಾರುವ ಸ್ಥಳಗಳಿರುತ್ತವೆ ಮತ್ತು ತಲೆ ಕೂದಲು, ಗಡ್ಡ ಮೀಸೆ ಬೋಳಿಸಲು ಕ್ಷೌರಕರು ಇರುತ್ತಾರೆ. ಮೊದಲು ಸಂಗಮದಲ್ಲಿ ಮುಳುಗಿ ಸ್ನಾನ ಮಾಡಿದ ನಂತರ ಕ್ಷೌರಿಕನಿಂದ ತಲೆ ಕೂದಲು, ಗಡ್ಡ, ಮೀಸೆ ಬೋಳಿಸಿ ಕಾಣಿಕೆ ಕೊಟ್ಟು ಪುನಹ ಸ್ನಾನ ಮಾಡಬೇಕು. ತದನಂತರ ಪಿಂಡದ ಸಾಮಾನು ಮಾರುವ ಸ್ಥಳಕ್ಕೆ ಹೋಗಿ ಅಲ್ಲಿ ಪಿಂಡದ ಸಾಮಾನು ಇರುವ ಎಲೆಯನ್ನು ಖರೀದಿಸಿ ನೇರವಾಗಿ ನದಿಯ ಆಚೆ ಬದಿಯಲ್ಲಿ ಕುಳಿತಿರತಕ್ಕ ಪುರೋಹಿತ (ಬ್ರಾಹ್ಮಣ)ರ ಹಸ್ತ ಕೊಡತಕ್ಕದ್ದು. ಪುರೋಹಿತರು ಹೇಳಿದಂತೆ ಅವರ ಎದುರಿನಲ್ಲಿ ಕುಳಿತು ಕೆಲವು ಮಂತ್ರೋಚ್ಛಾರಗಳನ್ನು ಹೇಳಿದ ನಂತರ ಅವನು ಹೇಳಿದಂತೆ ದೀಕ್ಷಿತನಿಗೆ ಹೇಳಲು ಹೇಳುವನು. ಕೈ ಬೆರಳಿಗೆ ದರ್ಬೆಯನ್ನು ಕಟ್ಟಿ ಪಿಂಡದ ಎಲೆಗೆ ನೀರು ಬಿಟ್ಟು ಪುರೋಹಿತ ಹೇಳಿದಂತೆ ಮಾಡುವುದು. ಪಿಂಡದ ಎಲೆಯನ್ನು ಸಂಗಮದಲ್ಲಿ ಬಿಟ್ಟು ನೀರಿನಲ್ಲಿ ಮುಳುಗಿ ಸ್ನಾನ ಮಾಡಿ ಮಡಿ ಬಟ್ಟೆಗಳನ್ನು ತೊಟ್ಟು ಪುರೋಹಿತನ ದಕ್ಷಿಣೆ ಕೊಟ್ಟು ಮೊದಲೇ ತಂದ ಹಣ್ಣು ಕಾಯಿ ಫಲಾಮೃತದೊಂದಿಗೆ ದೇವಸ್ಥಾನದ ಪೂಜೆಗೆ ಹೋಗುವುದು. ದೇವರಿಗೆ ಪೂಜೆ ಸಲ್ಲಿಸಿ ತೀರ್ಥ ಪ್ರಸಾದ ಸ್ವೀಕರಿಸಿ ಮನೆಗೂ ತಂದು ಮನೆಯವರಿಗೆ ಕೊಡುವುದು. ಇಲ್ಲಿ ಪಿಂಡ ಹಾಕುವ ಕ್ರಮ ಮುಗಿಯಿತು.

**ಪಿಂಡ ಹಾಕುವ ಬಗ್ಗೆ ಸ್ವಾರಸ್ಯವಾದ ಕಥೆಯೊಂದಿಗೆ :**

ಹಿಂದಿನ ಕಾಲದಲ್ಲಿ ಒಬ್ಬ ರಾಜಕುಮಾರನು ಬೇಟೆಗಾಗಿ ಒಂದು ದೊಡ್ಡ ಘೋರಾರಣ್ಯಕ್ಕೆ ಹೋದನಂತೆ. ಅಲ್ಲಿ ದಾರಿ ತಪ್ಪಿ ಬಹುದೂರ ಹೋದುದರಿಂದ ದಣಿವು ಆರಿಸಲು ಒಂದು ಮರದ ನೆರಳಿನಲ್ಲಿ ಮಲಗಿ ನಿದ್ರೆ ಮಾಡಿದನಂತೆ ಇವನಿಗೆ ಎಚ್ಚರವಾಗುವಷ್ಟರಲ್ಲಿ ರಾತ್ರಿ ಎಷ್ಟೋ ಸಮಯ ಕಳೆದಿತ್ತು. ಆ ಹೊತ್ತಿನಲ್ಲಿ ಆ ಅರಣ್ಯದಲ್ಲಿ ವಾಸಿಸುತ್ತಿದ್ದ ಒಂದು ರಣ ಭೂತವು ಆರ್ಭಟಿಸುತ್ತಾ ಇವನ ಸಮೀಪಕ್ಕೆ ಬಂದು ರಾಜಕುಮಾರನನ್ನು ತಿನ್ನಲು ಪ್ರಯತ್ನಿಸುವ ಸಮಯದಲ್ಲಿ ರಾಜಕುಮಾರನಿಗೆ ಎಚ್ಚರವಾಗಿ ಈ ಭಯಂಕರ ರೂಪದ ರಣ ಭೂತವನ್ನು ನೋಡಿದನು. ಉದ್ದವಾದ ಕೋರೆ ಹಲ್ಲುಗಳು, ನೀಳವಾಗಿ ಬಿಟ್ಟ ಕೇಶರಾಶಿಗಳು, ಗಡ್ಡ, ಮೀಸೆಗಳು ಹೊರ ಚಾಚಿದ್ದ ನೀಳವಾದ ನಾಲಿಗೆ ಬೆಂಕಿಯ ಕೆಂಡದಂತೆ ಉರಿಯುತ್ತಿದ್ದ ಕಣ್ಣುಗಳು ಇರುವುದನ್ನು

ಕಂಡು ರಾಜಕುಮಾರನು ಭೀತಿ ಪಡದೆ ಆ ರಣ ಭೂತವನ್ನು ಕುರಿತು ನೀನು ಯಾರೆಂದು ಪ್ರಶ್ನಿಸಿದನು. ಅದಕ್ಕೆ ರಣಭೂತವು ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸಿ ಕಣ್ಣೀರು ಸುರಿಸುತ್ತಾ ತನ್ನ ಕಥೆಯನ್ನು ಹೇಳ ತೊಡಗಿದನು. ನಾನು ಒಂದಾನೊಂದು ಕಾಲದಲ್ಲಿ ನಿನ್ನಂತೆಯೇ ಒಬ್ಬ ರಾಜಕುಮಾರನಾಗಿದ್ದೇನು. ನಾನು ಕೂಡ ಬೇಟೆಗಾಗಿ ಬಂದವನು. ಕಾಡಿನಲ್ಲಿ ಆಕಸ್ಮಿಕವಾಗಿ ಮರಣ ಹೊಂದಿದೆನು. ನಾನು ಮರಣ ಹೊಂದಿದ್ದು ನನ್ನ ಸಂಬಂಧಿಕರಿಗೆ ತಿಳಿಯಲೇ ಇಲ್ಲ. ಎಲ್ಲಿಯೂ ದೇಶ ಸಂಚಾರಕ್ಕಾಗಿ ಹೋಗಿರಬಹುದೆಂದು ಭಾವಿಸಿದರು. ಆ ಕಾರಣದಿಂದಾಗಿ ಸತ್ತವರಿಗೆ ಮಾಡಬೇಕಾದ ಉತ್ತರಕ್ರಿಯೆಯನ್ನು ಮಾಡಲಿಲ್ಲ. ಆದುದರಿಂದ ನನಗೆ ಮೋಕ್ಷದ ಗತಿ ಸಿಕ್ಕದೆ ಈ ರಣ ಭೂತದ ಜನ್ಮ ಪ್ರಾಪ್ತವಾಯಿತು. ಎಷ್ಟೋ ಸಮಯಗಳಿಂದ ಈ ಘೋರ ಅರಣ್ಯದಲ್ಲಿ ಅಲೆಯುತ್ತಿರುವೆನು. ಇಂದು ನನ್ನಂತೆ ಬಂದ ರಾಜಕುಮಾರನಾದ ನಿನ್ನ ಭೇಟಿಯಾಯಿತು. ನನಗೆ ಈ ರಣ ಭೂತದ ಜನ್ಮ ಹೋಗಿ ಮೋಕ್ಷ ಸಿಗಬೇಕಾದರೆ ನಿನ್ನಿಂದ ಸಾಧ್ಯವೆಂದು ಹೇಳಿತು.

ಒಡನೆಯೇ ರಾಜಕುಮಾರನು ಅದೇನೆಂದು ಹೇಳು, ಅಂತೆಯೇ ನಾನು ನಿನಗಾಗಿ ಮಾಡುವೆನೆಂದು ವಚನವಿತ್ತನು. ರಣ ಭೂತವು ಸತ್ತವರಿಗಾಗಿ ಮಾಡುವ ಕ್ರಿಯೆಗಳನ್ನೆಲ್ಲಾ ಸವಿಸ್ತಾರವಾಗಿ ಹೇಳಿ, ಪುಣ್ಯ ಕ್ಷೇತ್ರದಲ್ಲಿ ಪಿಂಡ ಹಾಕುವ ಕ್ರಮವನ್ನು ವಿವರಿಸಿತು. ಅಂತೆಯೇ ಮಾಡುವುದಾಗಿ ರಾಜಕುಮಾರನು ರಣ ಭೂತಕ್ಕೆ ಮತ್ತೊಮ್ಮೆ ವಾಗ್ದಾನ ಮಾಡಿದನು. ರಣ ಭೂತವು ರಾಜಕುಮಾರನಿಗೆ ರಾಜಧಾನಿಗೆ ಹಿಂತಿರುಗುವುದಕ್ಕೆ ಮಾರ್ಗವನ್ನು ತೋರಿಸಿ ರಾಜಕುಮಾರನನ್ನು ಬೀಳ್ಕೊಟ್ಟಿತು.

ರಾಜಕುಮಾರನು ಅರಮನೆಗೆ ಹಿಂತಿರುಗಿದ ಕೂಡಲೇ ಕಾರ್ಯಪ್ರವರ್ತನಾಗಿ ಒಂದು ತಿಂಗಳು ಗಡ್ಡ ಬಿಟ್ಟು ದೀಕ್ಷೆಗೆ ನಿಂತು ಉತ್ತರ ಕ್ರಿಯೆಗಳನ್ನು ಮಾಡಿ ರಣ ಭೂತವು ಹೇಳಿದತೆ ಪುಣ್ಯ ಕ್ಷೇತ್ರದಲ್ಲಿ ಪಿಂಡ ಹಾಕುವನು. ಆ ಸಮಯದಲ್ಲಿ ರಣ ಭೂತದ ಜನ್ಮ ಅಂತ್ಯಗೊಂಡು ಮೋಕ್ಷ ಸಿಕ್ಕಿ ಸ್ವರ್ಗ ಪ್ರಾಪ್ತವಾಯಿತು ಎನ್ನುವ ಕಥೆಯಿದೆ.

ಹಿರಿಯ ನಡವಳಿಕೆ ಪ್ರಕಾರ ಮೂರು ವರ್ಷದಿಂದ ಹನ್ನೆರಡು ವರ್ಷಗಳವರೆಗೆ ಮಾತಪಿತೃರಿಗೆ ತೀರ್ಥ ಕ್ಷೇತ್ರದಲ್ಲಿ ಪಿಂಡ ಹಾಕುವರು. ಪಿಂಡ ಹಾಕಿಸಿಕೊಂಡ ಮೃತನ ಆತ್ಮಕ್ಕೆ ಶಾಂತಿ ಸಿಕ್ಕಿ ಮೋಕ್ಷ ಹೊಂದಿ ಸ್ವರ್ಗ ಸುಖವನ್ನು ಅನುಭವಿಸುವನು ಎಂಬ ನಂಬಿಕೆ.

## ದೀಪಾವಳಿಯಲ್ಲಿ ಅವಲು ಹಾಕುವುದು (ಅವಲಕ್ಕಿ ಬಡಿಸುವುದು)

ಸತ್ತವನಿಗೆ ಮನೆಯವರು ಅದೇ ವರ್ಷ ದೀಪಾವಳಿಯ ಸಮಯದಲ್ಲಿ ಅಮವಾಸ್ಯೆ ದಿವಸ ಹೆಣ್ಣಿಗೂ, ಅದರ ಮಾರನೆಯ ದಿವಸ ಗಂಡಿಗೂ ಅವಲು ಬಡಿಸುವ ಕ್ರಮವಿದೆ. ಅಂದು ಮುಂಜಾನೆ ಸಾಧಾರಣ ನಾಲ್ಕು ಗಂಟೆ ಸಮಯದಲ್ಲಿ ಅವಲಕ್ಕಿ ಬೆಲ್ಲ, ಬಾಳೆಹಣ್ಣು, ತುಪ್ಪ, ತೆಂಗಿನಕಾಯಿ, ತುರಿಯಿಂದ ಬಾಳೆ ಎಲೆಯ ಮೇಲೆ ಎಡೆ ಹಾಕುವರು. ಕೊಡಗಿನಲ್ಲಿ ಎಲ್ಲಾ ಮನೆಗಳಲ್ಲಿ ದೀಪಾವಳಿಯನ್ನು ಆಚರಿಸುವುದಿಲ್ಲ. ಸತ್ತವರ ಮನೆಗಳಲ್ಲಿ ಮಾತ್ರ ದೀಪಾವಳಿ ಆಚರಿಸುತ್ತಾರೆ. ಆದರೆ ಗೌಡ ಜನಾಂಗದವರು ಮಿಥುನ ಮಾಸ (ಕಾರು ತಿಂಗಳು)ದಲ್ಲಿ ಸಾಧಾರಣವಾಗಿ ಎಲ್ಲಾ ಕುಟುಂಬದಲ್ಲಿಯೂ ಕಾರು ತಿಂಗಳ ಹರಿಕೆ ಎಂದು ಕೊಲೆಗಳಿಗೆ ಹರಿಕೆ ಒಪ್ಪಿಸುತ್ತಾರೆ.

> 'ಅರ್ಥ ಯಾರಿಗೆ ಪುತ್ರರ್ಯಾರಿಗೆ ಮಿತ್ರಬಾಂಧವರ್ಯಾರಿಗೆ ಕರ್ತುಯಮನರು ಎಳೆದು ಒಯ್ವಾಗ ತೊಳಲಿ ಬೀಳ್ವದು ನಾಲಗೆ'
>
> 'ಮಂಚ ಬಾರದು ಮಡದಿ ಬಾರದು ಸಂಚಿತಾರ್ಥದ ದ್ರವ್ಯ ಬಾರದು ಕಂಚು ಕನ್ನಡಿ ಬಾರದು ಮುನ್ನ ಮಾಡಿ ಧರ್ಮವೆ'
>
> *– ಪುರಂದರ ದಾಸ*

# ಬಾಲ್ಯ ಶವ ಸಂಸ್ಕಾರ

ಗೌಡರ ಶವ ಸಂಸ್ಕಾರದಲ್ಲಿ ಪ್ರೌಢಾವಸ್ಥೆಗೆ ಮಕ್ಕಳು ಬಾರದೇ ಬಾಲ್ಯದಲ್ಲಿ ಮೃತರಾದರೆ ಅವರಿಗೆ ಆಗುವ ಸಂಸ್ಕಾರವು ಇತರರಿಗಿಂತ ಭಿನ್ನವಾದುದು. ಅದನ್ನು ಸಂಸ್ಕಾರ ಎಂದು ಹೇಳುವುದಕ್ಕಿಂತಲೂ ದಪನ ಎಂದೇ ಹೆಚ್ಚಾಗಿ ಹೇಳುವರು. ಅವರನ್ನು ಸುಡುವಂತಿಲ್ಲ. ಮಣ್ಣು ಮಾಡುವ ಕ್ರಮ ನಡೆಯುವುದರಿಂದ ಅದನ್ನು ದಪನ ಎಂದು ಹೇಳಲಾಗಿದೆ. ಗೌಡ ಜನಾಂಗದ ಸಂಪ್ರದಾಯದಲ್ಲಿ ನಡೆದು ಬರುವುದು ಮತ್ತು ಪ್ರಸ್ತುತ ಮುಂದುವರಿದುಕೊಂಡು ಬರುತ್ತಿದೆ. ಮಗುವೊಂದು ಕಾರಣಾಂತರದಿಂದ ಮೃತಪಟ್ಟರೆ ಸಮೀಪದ ನೆರೆವರನ್ನು ಬರಮಾಡಿಕೊಂಡು ಮೃತ ಮಗುವನ್ನು ಸ್ನಾನ ಮಾಡಿಸಿ ಮಡಿ ಬಟ್ಟೆಯನ್ನು ತೊಡಿಸಿ, ಬಿಳಿ ಬಟ್ಟೆಯನ್ನು ಹೊದಿಸಿ ಶವದ ಬಾಯಿಗೆ ನೀರು ಕೊಟ್ಟು (ಹಾಲು, ಎಳನೀರು ಮಿಶ್ರಣವನ್ನು ತುಳಸೀ ಕುಡಿಯಿಂದ ಕೊಡುವುದು) ಮಗುವನ್ನು ದಪನ ಮಾಡುವುದಕ್ಕೆ ನಿಶ್ಚಯಿಸಿದ ಸ್ಥಳದಲ್ಲಿ ಮಗುವಿನ ಉದ್ದಳತೆಗೆ ಸಾಕಷ್ಟು ಗುಂಡಿ ತೆಗೆದು ಅಲ್ಲಿಗೆ ತೋಳಿನಿಂದಲೆ ಎತ್ತಿಕೊಂಡು ಹೋಗುವುದು. ಮತ್ತು ಗುಂಡಿಯಲ್ಲಿಟ್ಟು ಸ್ವಲ್ಪ ಹಾಲು ಹುಯ್ದು ದಪನ ಕಾರ್ಯ ಮುಗಿಸುವುದು. ಅಕ್ಕಿ ಭತ್ತ ಇರುವುದಾಗಲಿ, ಚಟ್ಟ ಕಟ್ಟುವುದಾಗಲಿ, ಪ್ರಾಪ್ತ ಮನಸ್ಸಿಗೆ ಬರುವವರೆಗೆ ಇರುವುದಿಲ್ಲ. ನಂತರ ಎಲ್ಲರೂ ಸ್ನಾನ ಮಾಡಿ ಬರುವುದು. ಐದು ಅಥವಾ ಏಳನೇಯ ದಿನದಂದು ಹಾಲು ಅನ್ನವನ್ನು ಮಗುವಿನ ದೂಪೆಯ ಹತ್ತಿರವಿಟ್ಟು ಸರಳಿ ಸೊಪ್ಪನ್ನು ಕುತ್ತಿ ಸ್ನಾನ ಮಾಡಿ ಬರುವುದು. ಊರಿನವರಿಂದ ಪುಣ್ಯ ನೀರನ್ನು ತರಿಸಿ (ಪುಣ್ಯಾರ್ಚನೆ) ಮೈಗೂ ಮನೆಗೂ ಸಿಂಪಡಿಸಿಕೊಳ್ಳುವುದು. ಇದರಲ್ಲಿ ಕ್ಷೌರಿಕ, ಮಡಿವಾಳ, ಓಲಗದವರ ಸಹಕಾರವನ್ನು ಈ ಸಂಪ್ರದಾಯದಲ್ಲಿ ಸೇರಿಸಿಕೊಳ್ಳುವುದಿಲ್ಲ. ಇಲ್ಲಿಗೆ ಬಾಲ್ಯ ಶವ ಸಂಸ್ಕಾರ ಮುಗಿಯಿತು.

> ವಿಯೋಗದ ಘಳಿಗೆ ಬರದ ಹೊರತು ಪ್ರೀತಿಗೆ ತನ್ನ ಅಘಾಧತೆಯ ಅರಿವು ಆಗಬಾರದು.
>
> *–ಖಲೀಲ್ ಗಿಬ್ರಾನ್*

# ಅವಿವಾಹಿತ ಶವ ಸಂಸ್ಕಾರ

ಮೃತಪಟ್ಟವರು ಅವಿವಾಹಿತರಾಗಿದ್ದು ವಿವಾಹ ಪ್ರಾಯ ಕಳೆದು ವೃದ್ಧಾಪ್ಯವಿದ್ದು ಮೃತರಾದರೆ ಎಲ್ಲಾ ಸಂಪ್ರದಾಯ ಶಾಸ್ತ್ರಗಳನ್ನು ಶವಸಂಸ್ಕಾರ ರೀತ್ಯ ಮಾಡುವುದು. ಆದರೆ ಚಟ್ಟ ಕಟ್ಟಿ ಹೊರುವಾಗ ಒಂದೇ ದಂಡದಲ್ಲಿ (ಒಂಟಿ ಬಡಿಗೆ) ಚಾಪೆಯ ಮೇಲೆ ಎಲೆಯನ್ನು ಮಗುಚಿ ಇಟ್ಟು ಅದರ ಮೇಲೆ ಶವವನ್ನು ಇಟ್ಟು ಒಂದೇ ಬಿದಿರಿನ ಬಡಿಗೆಗೆ ಬಿಗಿದು ಹೊರುವುದು.

ಮೃತಪಟ್ಟವರು ಅವಿವಾಹಿತರಾಗಿದ್ದು ವಿವಾಹ ಪ್ರಾಯಕ್ಕೆ ಬಂದಿದ್ದು ಮೃತಪಟ್ಟರೆ ಅವರಿಗೆ ಆಗುವ ಶಾಸ್ತ್ರಗಳು ಬೇರೆಯೇ ಆಗುವುದು. ಅವರನ್ನು ಕೂಡ ಒಂಟಿ ಬಡಿಗೆಯಿಂದ ಹೊರಬೇಕು. ಆದರೆ ನಂತರದ ಸಮಯದಲ್ಲಿ ಅವರಿದಮ ತೊಂದರೆಗಳು ಕಾಣಿಸಿಕೊಳ್ಳುವುವು ಎಂದು ಅವರಿಗೆ ಕೆಲವು ಕಡೆಗಳಲ್ಲಿ ಆ ದಿನ ಮದುವೆ ಏರ್ಪಾಡು ಮಾಡುವರು. ಮೃತಪಟ್ಟವರು ಗಂಡಾದರೆ ಬಾಳೆಯ ಕಂದಿಗೆ ನೂಲು ದಾರದಿಂದ ತಾಳಿಯೊಂದು ಮಾಡಿ ಮೃತನ ಕೈಯಿಂದ ಬಾಳೆಯ ಕಂದಿಗೆ ತಾಳಿ ಕಟ್ಟಿಸಿದಂತೆ ಮಾಡಿಸಿ ಚಟ್ಟಕಟ್ಟಿ ಹೊತ್ತು ಸುಡುವುದು. ಕ್ರಮ. ಮೃತರು ಹೆಣ್ಣಾದಲ್ಲಿ ಹುಲ್ಲಿನಿಂದ ಗಂಡನಾಕೃತಿಯ ಬೊಂಬೆಯೊಂದನ್ನು ಮಾಡಿ ಬೊಂಬೆಯ ಕೈಯಿಂದ ಹೆಣ್ಣೀಗೆ ತಾಳಿ ಕಟ್ಟಿಸಿದಂತೆ ಮಾಡಿ ಹೊತ್ತು ಸುಡುವರು. ಉಳಿದೆಲ್ಲಾ ಶಾಸ್ತ್ರಗಳು ಇತರರಂತೆಯೇ ನಡೆಯುವುದು.

'ಅಸಂಸ್ಕೃತರು ಕೆಲವೊಮ್ಮೆ ಅಧರ್ಮವನ್ನು ಆಚರಿಸಿ ಅದು ಧರ್ಮವೆಂದು ತೋರುವ ಹಾಗೆ ಮಾಡುತ್ತಾರೆ. ಸುಸಂಸ್ಕೃತರು ಕೆಲವೊಮ್ಮೆ ಧರ್ಮವನ್ನೇ ಆಚರಿಸಿ ಅಧರ್ಮವೆಂದು ಮುಗ್ದರಿಗೆ ತೋರುವಂತೆ ಮಾಡುತ್ತಾರೆ.

–ವ್ಯಾಸ ಮಹರ್ಷಿ

# ಗೌಡ ಕುಟುಂಬದ ಹೆಸರುಗಳು
## ದಕ್ಷಿಣ ಕನ್ನಡ ಜಿಲ್ಲೆ

**ಅ–48**
ಅಡ್ಕಾರು
ಅಂಬೆಕಲ್ಲು
ಅಮೈ
ಅಳ್ಪೆ
ಅಡಿಗಾರು
ಅಳ್ಕೆ
ಅಡ್ಡಬಳೆ
ಅಡ್ತಲೆ
ಅಡ್ಪಂಗಾಯ
ಅಲೆಂಗಾರ
ಅಭಿಕಾರ
ಅಂಬಿಕಿನಲ್ಕೆ
ಅಂತರ
ಅಣಿಯಾರು
ಅಡಿಗೆರೆ
ಅಡ್ಡಂತಡ್ಕ
ಅಲುಗುಂಜ
ಅತ್ಯಾಡಿ
ಅಡ್ಕ
ಅನೆಕಲ್ಲು
ಅಳ್ವೆ
ಆತ್ರಿಕಟ್ಟೆ
ಅಂಬಬೆಡ್ಕ
ಅಜ್ಜಿಹಿತ್ಲು
ಅಡ್ರೋಜಿ
ಅರ್ಬಡ್ಕ
ಅಚ್ಲಪಾಡಿ
ಅಂಚೇರಿ
ಅಳಬೆ
ಅಲೇಕಿ
ಅಲೆಪಾಡಿ
ಅಂಬ್ರಾಟಿ
ಅಮ್ಚಿನಡ್ಕ
ಅಲಂಕಳಿಯ
ಅರಿಗ
ಅಂಗಣ
ಅಗಳಿ
ಅಂತರಬೈಲು
ಅರಿಯಡ್ಕ
ಅಚಾರಿಪಾಲು
ಅಭೀರ
ಅಂಗುಜ್ಜಿ
ಅಗೋಳಿಬೈಲು
ಅಂಕಿಕಡಲು
ಅಲೆಕಾಡಿ
ಅಜ್ಜಿಮನೆ
ಅಡ್ಯನಡ್ಕ
ಅಂಬಲ್ಪಾಡಿ
**ಆ–6**
ಆಜಡ್ಕ
ಆಲಾಜೆ
ಆಲ್ಕಬೆ
ಆರೆನೂಜಿ
ಆರ್ಜಿ
ಆಂಜನಕಜೆ
**ಇ–ಈ–6**
ಇಡ್ಯಪೆ
ಇಡ್ಯಡ್ಕ
ಇಜ್ಜೇಲು
ಇಜಿನಡ್ಕ
ಇಡಲ
ಇರ್ದೆಬೀಡು
**ಉ–ಊ–14**
ಊರುಬೈಲು
ಉಳುವಾರು
ಉರುಂಡೆ
ಉಬ್ರಾಳ
ಉಪ್ಪಳಿಕೆ
ಊರುಪಂಜ
ಉಂಜನ
ಉಪ್ಪುಕಳ
ಉಗ್ರಾಣಿ ಮನೆ
ಉಕ್ರಂಟೆ
ಉಳಿಯ
ಉಳಿಯಾರು
ಉಳಿಯಡ್ಕ
ಉಳಿಪು
**ಎ ಏ–10**
ಏನಡ್ಕ
ಎರ್ಮಾಳ
ಎಲಿಮನೆ
ಎಡಮನೆ
ಎರ್ದಡ್ಕ
ಎಣ್ಣೆಮಜಲು
ಎಳ್ಳತಡ್ಕ
ಎರ್ಕ
ಎಡಮಂಗಲ
ಎರ್ಮೆಗುಳಿ
**ಐ–1**
ಐತೂರು
**ಕ–179**
ಕೂಜುಗೋಡು
ಕೂಗಾಜೆ
ಕುರುಂಜಿ
ಕೆಮ್ಮಾರ
ಕೊರಂಬಡ್ಕ
ಕಿನ್ನಿಡುಮರಿ
ಕೈಕುರೆ
ಕಡಪಳ್ಳ
ಕಲ್ಲೆಂಬಿ
ಕುಂಟಿಕಾನ
ಕೋಟೇಲು
ಕೆದಂಬಾಡಿ
ಕುಳ್ಳಂಪಾಡಿ
ಕಿಲಾಡಿ
ಕುದುಂಗು
ಕ್ಯೊಲ

| | | | |
|---|---|---|---|
| ಕುಡಿಂಬಾರು | ಕೊಡೆಂಚಿ | ಕಾಳುಮನೆ | ಕುಂಞಚೆ |
| ಕಟ್ಟೆಮನೆ | ಕರಿಯಾಲ | ಕುಯಿಂತೋಡು | ಕೊಳಗೆ |
| ಕೆದಿಲ | ಕೊಳಂಬೆ | ಕಜ್ಜೋಡಿ | ಕಲ್ಪಡ |
| ಕಮಿಲ | ಕುಕ್ಕಿಲ | ಕೊಪ್ಪಡ್ಕ | ಕರೋಡಿ |
| ಕಾಣಿಕೆ | ಕೆಲಂಜಿಮಾರು | ಕಜೆಗದ್ದೆ | ಕಡೋಡಿ |
| ಕೆಬಲಾಡಿ | ಕೆಂದೋಡಿ | ಕಿನಾಲ | ಕುಪ್ಪದಮನೆ |
| ಕಂಡೂರು | ಕರಿಯನೀಲ | ಕಲ್ಲುಗದ್ದೆ | ಕಾಳುಮನೆ |
| ಕಂಬಲ | ಕುಕ್ಕಿಮಜಲು | ಕೊಚಾಚೆ | ಕಾಡುಪಂಜ |
| ಕಂಬರ್ಜ | ಕಂದರ್ಲ್ಲಾಜೆ | ಕಂಬಿರ್ಲ | ಕುಟ್ಟಾಲ |
| ಕನ್ನಿಗುಂಡ | ಕೇನಾಜೆ | ಕೋನಡ್ಕ | ಕರಂಗಲ್ಲು |
| ಕಳಗಿ | ಕಜೋಡಿ | ಕೀಲೆ | ಕೊರಂಬಟ್ಟ |
| ಕುಡೆಕಲ್ಲು | ಕೋಟೆ | ಕಲ್ಯಾ | ಕಲ್ಲುಗುಂಡಿ |
| ಕಟ್ಟೆಕೋಡಿ | ಕಾನತ್ತಿಲ | ಕ್ಯೊಂಗೋಡಿ | ಕುಂಬಡ್ಕ |
| ಕೋಲ್ಯಾರು | ಕುಕ್ಕಿಡೇಲು | ಕುಳಾಯಿ | ಕಲ್ಲಾಜೆ |
| ಕಳೆಯಾಡಿ | ಕುಕ್ಕೇಟಿ | ಕೋಣಡ್ಕ | ಕೊಲ್ಯ |
| ಕುಂಟೆಡ್ಕ | ಕುಂಬ್ಲಾಡಿ | ಕೋಡಿ | ಕಲ್ಲೇರಿ |
| ಕರ್ಮಾಲೆ | ಕುರುಮೇರೆ | ಕ್ಯೊಕುಳಿ | ಕಡ್ಯ |
| ಕೊಂಡೆಬಾಯಿ | ಕೇರನಡ್ಕ | ಕುಕ್ಯಾಳ | ಕಾಯರ್‌ಕೋಡಿ |
| ಖಂಡಿಗೆ | ಕೋಳ್ಪೆ | ಕಂಟ್ರಮಜಲು | ಕಡಿಯಾಲೆ |
| ಕೋಡ್ತುಕುಳಿ | ಕೂತೂರು | ಕೇರ್ಪಳ | ಕನ್ನಾರನೂಜಿ |
| ಕೆರೆಮೂರೆ | ಕರಿಭಾಗ | ಕುದುಕುಳಿ | ಕೊಳಂಬಳ |
| ಕುತ್ತಿಮುಂಡ | ಕುಳ | ಕಚ್ಚೋಡಿ | ಕುಯಿಂಕೋಡಿ |
| ಕರ್ಲಾಯ | ಕಣಲ್ಲು | ಕೆಬಲಾಡಿ | ಕಡೀಯಮೂಲೆ |
| ಕುದ್ಪಾಜೆ | ಕುಂಜೆತ್ತಾಡಿ | ಕಂಬರ್ಾನೆಕ್ಕಿಲ | ಕಲ್ಲುಮುಟ್ಲು |
| ಕನ್ಯಾನ | ಕೇಪಳಕಜೆ | ಕುಕ್ಕಪ್ಪನ ಮನೆ | ಕಂಜಿಪಿಲಿ |
| ಕುಕ್ಕೇಟಿ | ಕಜೆ | ಕೊಡಂಕೇರಿ | ಕಾಯರ |
| ಕಲ್ಯಾನ | ಕೊಡಪಾಲ | ಕಟ್ಟ | ಕುಂಟ್ರಾಪಾಡಿ |
| ಕರಿಕಜೆ | ಕಡ್ಲಾರು | ಕೋಟಗೌಡನ | ಕರಂಬಿಮನೆ |
| ಕಾಸ್ಪಾಡಿ | ಕೂರೇಲು | ಕಾಟೂರುಮನೆ | ಕುಂಬ್ಳತೇರಿ |
| ಕಲ್ಲಾಜೆ | ತೇನಾಜೆ | ಕುದ್ದ | ಕಾಡುಕೊಲ್ಲಿಯ |
| ಕಾಣಿಚಾರು | ಕುಂಟುಕಾಡ | ಕೆಣಕಲ್ಲು | ಕಾಣಿಯೂರು |

ಕೊಂಬಾರ
ಕಾರಿಂಜ
ಕುಕ್ಕುಜೆ
ಕಣಿಯ
ಕಾಣಿಯಾರು ಮೂಲೆ
ಕೊಮ್ಮಡ್ಕ
ಕುದನೆಕೋಡಿ
ಕಲ್ಪಾರು
ಕೀಲಾರು
ಕಾಯರ್‌ಮಾರ್
ಕೋಳ್ತ್ಗೆ
ಕನಕಮಜಲು
ಕರಿಯನಿಲ
ಕನ್ನಡ
ಕಳ್ವಾಜೆ
ಕಡ್ತಲಕಜೆ
ಕಜೆಮೂಲೆ
ಕಂಪತಡ್ಕ
ಕಾನೋವು
ಕೊಟ್ರುವಾಡಿ
ಕಾಮನಕಜೆ
ಕೇಪತಡ್ಕ
ಕುಂಡಡ್ಕ
ಕೊರೆತ್ಯಡ್ಕ
ಕನಿಪಿಲ
ಕಲ್‌ಮೂಲೆ
ಕೋಟೆಬನ
ಕುಕುತಡಿ
ಕೇವಳ
ಕಡೀರ
ಕುಕುಜೆಡ್ಕ

ಕೊಟ್ಟೆ
ಕಂಡಿಗೆ
ಕಂಡಿಗೆಮೂಲೆ
ಕೆದ್ದೋಟೆ
ಕೊಣಜನ ಮನೆ
ಕುತ್ಯಾಲ

**ಗ–15**
ಗುಂಡ್ಲ
ಗಲ್ಬಲ್ಕಜೆ
ಗೆಜ್ಜೆ
ಗುತ್ತು
ಗುಂಡ್ಯ
ಗಬ್ಬಲಡ್ಕ
ಗುಂಡಡ್ಕ
ಗೋಲ್ಯಾಡಿ
ಗುಡ್ಡೆ
ಗೂನಡ್ಕ
ಗುತ್ತಿಗಾರು
ಗಡದೂಡಿ
ಗುಡ್ಡನ
ಗೊಂಟಡ್ಕ
ಗೋಳ್ವಾಡಿ

**ಚ–18**
ಚೆಲ್ತಡ್ಕ
ಚೀಮುಳು
ಚುಕ್ರಡ್ಕ
ಚೊಚ್ಚೆ
ಚುಯಿಂಕೋಡು
ಚಮಣೂರು
ಚಂದ್ರಂಗಣ
ಚಳ್ಳಂಗಾರು
ಚೆಲ್ಪಾರು
ಚೋಪನ ಮನೆ
ಚಿದ್ಕಲು
ಚೇರುಮುಖಿ
ಚೆಂಡೆಮೂಲೆ
ಚಾವಡಿ
ಚಾರ್ವಕ
ಚೋಡಿಪಣೆ
ಚೂಂತಾರು
ಚೆನ್ನಬರಿ

**ಜ–6**
ಜಾಕೆ
ಜಾಲ್ನಡೆ
ಜೋಡಿಪಣೆ
ಜಾಲು
ಜಾರಿಗೆ ತಡಿ
ಜೇರೆಮುಖಿ

**ಪ–49**
ಪಂಜಿಪಳ್ಳ
ಪಡ್ಡಂಬೈಲು
ಪಾರೆಪ್ಪಾಡಿ
ಪೆತ್ತಾಜೆ
ಪೆಲತ್ತಡ್ಕ
ಪೆಂಬೆತ್ತಾಡಿ
ಪರಂಗೋಡಿ
ಪಿಂಜಕಳ
ಪಜಿಯಡ್ಕ
ಪೆರ್ಲಂಪಾಡಿ
ಪಾಂಬಾರು
ಪಾಣತ್ತಿಲ
ಪೂಜಾರಿಮನೆ
ಪಿಂಡಿಮನೆ
ಪೆರ್ಲ
ಪಳಂಗಾಯ
ಪರಮಲೆ
ಪೈಕ
ಪುದ್ದೋಟು
ಬೈಲು
ಪೆರ್ಲಾಣೆ
ಪೆಂಗೀಲು
ಪಟ್ಟೆ
ಪರಾರಿ
ಪಯೇಬಿ
ಕಾರೆಮಜಲು
ಪೈಲೂರು
ಪಾತಿಕಲ್ಲು
ಪೈಲಾಜೆ
ಪಜಲ
ಪಡಿಕಲ್ಲು
ಪೀರಮನೆ
ಪೂಜಾರಿಕೋಡಿ
ಪೂಮೊಂಡಿ
ಪುಣಿಕುಂಟಿ
ಪಡ್ಪು
ಪೈಲಾಜೆ
ಪಿಲಿಕಜೆ
ಪಡ್ಯಳ್ಪು
ಪಾರ
ಪುಳಿಮರಡ್ಕ
ಪುನ್ಸೇತ್ತಾಯ
ಪುಚ್ಚೇರಿತೋಟ
ಪಳ್ಳತಡ್ಕ

| | | | |
|---|---|---|---|
| ಪದೇಲ | ಬೊಳ್ಗಲ್ಲು | ಮಾಣಿಬೈಲು | ಮುಕ್ರುಂಫಾಡಿ |
| ಪೊಂಬಾಡಿ | ಬೊಬ್ಬೆಕೇರಿ | ಮಡಿಯಾರ | ಮೊಮ್ಮರಿ |
| ಪುರ್ಲಜೆ | ಬಾಕಿಲಾಡಿ | ಮರೋಳಿ | ಮಚ್ಚನಡ್ಕ |
| ಪುಂಡಿಗದ್ದೆ | ಬೊಳ್ಳೂರು | ಮಾದನ | ಮುರೂರು |
| ಬ–42 | ಬೈತಡ್ಕ | ಮರ್ಕಡ | ಮುಳುಗಾಡು |
| ಬಿಳಿಮಲೆ | ಬರೆಮೇಲ್ | ಮಣಿಯಾನ | ಮುದ್ಯ |
| ಬೊಮ್ಮನ | ಬಾರೆತಡ್ಕ | ಮಲ್ಲುಜಿ | ಮುಂಗ್ಲಿಮನೆ |
| ಬೊಳ್ತಜೆ | ಬೊಬ್ಬೇರಿಯ | ಮೊಟ್ಟೆಮನೆ | ಮೀನಗದ್ದೆ |
| ಬಿನ | ಬೊಮ್ಮಲ್ಲಿಗೆ | ಮೇರ್ಕಜೆ | ಮಾಲ್ಬಾರು |
| ಬೋಜಾರು | ಬಲ್ಯ | ಮೂವರ | ಮಿತ್ತಮಜಲು |
| ಬಾಳೆಹಿತ್ಲು | ಬಲ್ಕಜೆ | ಮುಳಬಾಗಿಲು | ಮೀತ್ತಮಜಲು |
| ಬರೆಮೇಲು | ಬೈಲಾಡಿ | ಮೂಡನಕಜೆ | ಮೇಲ್ನಾಡಾ |
| ಬಾಳುಗೋಡು | ಬೆಲ್ಲಾರ್ | ಮೆದು | ಮಾವಿನಕಟ್ಟೆ |
| ಬೆಡಿಗುತ್ತು | ಬಜೆಂತಡ್ಕ | ಮೆತ್ತಡ್ಕ | ಮಂಡೆಕೋಲು |
| ಬೆದ್ರುಪಣೆ | ಬೆಂಗಮಲ್‌ಮನೆ | ಮುಪ್ಪೇರಯ | ಮಣಿಯಾರು |
| ಬೆಳ್ಳೂರು | ಮ–71 | ಮುಂಡಾಜೆ | ಮಾವಿನಗೊಡ್ಲು |
| ಬಳ್ಪಡ್ಕ | ಮುರುಳ್ಯ | ಮಾಡವು | ಮರ್ಕಟ |
| ಬಾಕಿಲ | ಮಾಣಿಬೆಟ್ಟು | ಮೂಲೆಗದ್ದೆ | ಮೇಲ ಅಡ್ತಲೆ |
| ಬಾಬಿಲಿಬೆಟ್ಟು | ಮೋಂಟಡ್ಕ | ಮುಂಡಾಲಿ | ಮಂದಿರಿಪ್ಪಾಡಿ |
| ಬಂಟೋಡಿ | ಮಾವ್ರೋಜಿ | ಮೆಣಸಿನಡ್ಕ | ಮುಂಡ್ರಾಜೆ |
| ಬಾಚಗದ್ದೆ | ಮುದ್ದಾಜೆ | ಮಿಯೋಳ್ಪೆ | ಮುದ್ಪ |
| ಬಾರಿಕೆ | ಮುಂಡೋಡಿ | ಮಾಚಿಲ | ಮಂಗಳಪಾಡಿ |
| ಬಿರ್ಮುಕಜೆ | ಮಡಪ್ಪಾಡಿ | ಮೊಮ್ಮಳಿಗೆ | ಮಾರತಡ್ಕ |
| ಬಡ್ಕನೋರ | ಮಡ್ತಿಲ | ಮೈರೋಳು | ಮೂಲೆಹಿತ್ಲು |
| ಬಜೆತ್ತೂರು | ಮಾಲಿಂಗೇರಿ | ಮಂಕುಡೆ | ಮುದಿಯಾರು |
| ಬಾಜಿನಡ್ಕ | ಮುತ್ಯಾಜೆ | ಮೊಗ್ರು | ಮಳಬೈಲು |
| ಬಿಳಿಯಾರ | ಮುಗಿಳಿತಡ್ಕ | ಮಲೆಬಾವು | ಮಡೂರ್ |
| ಬಾದ್ರಮನೆ | ಮೂಡೂರು | ಪಾರ್ಪಡ್ಕ | ತ–8 |
| ಬಂಡಡ್ಕ | ಮಾಡಬಾಕಿಲು | ಮರಿಕೆ | ತಳೆಯಾರಿ |
| ಬಾಳೆತೋಟ | ಮಲ್ಲಾರ | ಮಂದ್ರಪಾಡಿ | ತುಂತ್ತಜ್ಜೆ |

ತೆಕಿನ
ತಂಟೆಪಾಡಿ
ತಿಪ್ಪನೂರು
ತೋಟಜಿತ್ತಿಲ
ತೋಟದಮನೆ
ತೋರೆರಮನೆ
ತಳೂರು
**ದ–17**
ದೇರಾಜೆ
ದೋಲ್ಪಾಡಿ
ದೇರಪ್ಪಜ್ಜನ
ದಂಡಿನಮನೆ
ದೇವಶ್ಯ
ದೇವರಗುಂಡ
ದೇಲಂಪಾಡಿ
ದಂಡು
ದಂಬೆಕೋಡಿ
ದೋಳನಮನೆ
ದೇರಮಜ್ಲು
ದೊಡ್ಡಮನೆ
ವಾರ್ಕಾಸ್
ದೇಂಗೋಡಿ
ದುಗ್ಗಾಣಿ
ದುಗಲ
ದಿಟಿಗೆಮನೆ
**ಡ–2**
ಡೆಕ್ಕಳ
ಡೆಚ್ಚಾರು
**ನ–29**
ನೂಜಿ
ನಾಯಿಮಾರು
ನಾರ್ಕೋಡು
ನೆತ್ತಾರು
ನೂಜಾಲು
ನಡುಮನೆ
ನಡುಬೆಟ್ಟು
ನಿಡುಬೆ
ನೇರಳ
ನಡುಬೈಲು
ನೆಕ್ರಾಜೆ
ನರಿಯೂರು
ನಡಕಾನಾಣಿಲ
ನಂಗಾರು
ನೆಕ್ಲಾಜೆ
ನಡುಮಜಲು
ನಡುಗಲ್ಲು
ನರಾಲು
ನಾವೂರು
ನರಿಮೊಗರು
ನೆಕರೆ
ನೆಲ್ಲಿಕಟ್ಟೆ
ನೆಡ್ಡಿಲು
ನೆಕ್ಕಿಲ
ನಿಡ್ಯಮಲೆ
ನೀರ್ಪಾಡಿ
ನಾರ್ಣಕಜೆ
ನಾರಿಯ
ನಾಳ
**ಯ–3**
ಯೇನೆಕಲ್ಲು
ಯೇನಡ್ಕ
ಯೆರ್ದಡ್ಕ
**ರ–1**
ರಾಗಿ ಅಡ್ಕ
**ವ–7**
ವಾಲ್ತಾಜೆ
ವಳಂದೂರು
ವಾಡ್ಯಕ್ಕ
ವರ್ಕಲ
ವಾಚೆಡ್ಕ
ವೋಲಿಕಜೆ
ವಗಂಬ್ರ
**ಸ–23**
ಸಾಲಡ್ಕ
ಸುಳ್ಯಕೋಡಿ
ಸಿದಿಗಲ್ಲು
ಸೋಣಂಗೇರಿ
ಸಂಣಮನೆ
ಸಿಲಕುಂಜೆ
ಸಂಕೇತ
ಸೆಟ್ಟಿಯಡ್ಕ
ಸೀರ್ತಕೇರಿ
ಸಾಂತಿಯಡ್ಕ
ಸಾರಕುಟೆಲು
ಸಬಲೂರು
ಸೊಡ್ಲು
ಸವಣೂರು
ಸಾಲ್ತಾಡಿ
ಸಿರಕಲ್ಲು
ಸಂಪ್ಯಾಡಿ
ಸಿದ್ದಕಜೆ
ಸುಳ್ಳಿಮನೆ
ಸಬ್ಯಾಜೆ
ಸುಬ್ಬಯ ಮೂಲೆ
ಸಂತೆಡ್ಕ
**ಶ–7**
ಶಿರ್ವಾಜೆ
ಶಿರೂರು
ಶಾಂತಾಳ
ಶೀರಡ್ಕ
ಶಿರೆಕಜೆ
ಶೇಡ್ಯಾವು
ಶೇಣಿ
**ಹ–20**
ಹೊಸೋಳ್ಕೆ
ಹೊಸಹಿತ್ಲು
ಹೊಸಮನೆ
ಹಿರಿಯಡ್ಕ
ಹರ್ತ್ಲಾರು
ಹಸಿಯಡ್ಕ
ಹುಲಿಮನೆ
ಹೊನಪಾಡಿ
ಹಾಳನಮನೆ
ಹಾಲೆಮಜಲು
ಹುದೇರಿ
ಹರಿಹರ
ಹೊಸಗದ್ದೆ
ಹೇಮಳ
ಹುಲುಕಮಾರಿ
ಹೊದ್ದೆಟ್ಟೆ
ಹೆರೆಕಜೆ
ಹಾಡಿಕಲ್ಲು
ಹಾಸಡ್ಕ
ಹಾಪ್ಯಾಕಿ

# ಕೊಡಗು ಜಿಲ್ಲೆ

**ಅ–20**
ಅಮೆಮನೆ
ಅಯ್ಯಂಡ್ರ
ಅಚ್ಚಿಪಟ್ಟಿರ
ಅಚ್ಚಾಂಡಿರ
ಅಂಚೆಮನೆ
ಅಮ್ಮವ್ವನ
ಅಯ್ಯೇಟಿರ
ಅರಂಬೂರು
ಅಜ್ಜೇಗೌಡನ
ಅಳಿಕೆ
ಅಣ್ಣಚ್ಚಿರ
ಅರ್ಪೆಗಟ್ಟಿ
ಅಚ್ಚುಡ
ಅಕ್ಕಾರಿ
ಅಂಬೆಕಲ್ಲು
ಅಚ್ಚಲ್ಪಾಡಿ
ಅಮಚೂರು
ಅಂಬ್ರಾಟಿ
ಅತ್ತೇಡಿ
**ಆ–3**
ಆನೇರ
ಆಜಡ್ಕ
ಆಜೀರ
**ಇ–2**
ಇಟ್ಟಣಿಕೆ
ಇಡ್ಯಡ್ಕ
**ಉ–5**
ಉದಿಯನ
ಉಳುವಾರನ
ಉಡುದೋಳಿ
ಉಗ್ರಾಣಿರ
ಉಪ್ಪುಕುಳಿ
ಉಪ್ಪುಂಡಿರ
**ಊ–2**
ಊರೋಳನ
ಊರುಬೈಲು
**ಎ–4**
ಎಣ್ಣೆಕಾಳುಮನೆ
ಎಡಕೇರಿ
ಎರ್ಮೆಕಾಲು
ಎಣಿಯಾರು
ಓಡಿಯನ
ಓಡಿಯಪ್ಪನ
**ಕ–108**
ಕುಂಬುಗೌಡನ
ಕುದುಪಜೆ
ಕಾಳೇರಮ್ಮನ
ಕೆದಂಬಾಡಿ
ಕುಂಞಾಳಿ
ಕುಲ್ಲಚ್ಚನ
ಕೂಡಕಂಡಿ
ಕುಯಿಂತೋಡು
ಕರ್ಣಯ್ಯನ
ಕಾನಡ್ಕ
ಕೋಡಿ
ಕಡ್ಯದ
ಕೊಲ್ಯದ
ಕೋರನ
ಕೊಡಗನ
ಕೂಪೇರ
ಕಾಸ್ಪಾಡಿ
ಕುರುಂಬಿ
ಕಾನೆಹಿತ್ಲು
ಕುಯ್ಯಮುಡಿ
ಕೊಂಪುಳಿರ
ಕಟ್ಟೆಪುರ
ಕೇನೇರ
ಕುಕ್ಕನೂರು
ಕುದುಕುಳಿ
ಕೊಡೆಕಲ್ಲು
ಕರಕರನ
ಕೋಳಿಬೈಲು
ಕೇಕಡ
ಕೋಟೇರ
ಕೊಡಪಾಲ
ಕೇಟೋಳಿ
ಕುಂಜಿಲನ
ಕಳಂಜನ
ಕುಂಚಡ್ಕ
ಕುದನೆಕೋಡಿ
ಕಾಂಗೀರ
ಕಾಳೆಯಂಡ್ರ
ಕಾಯರ
ಕುಟ್ಟಮಣಿಯನ
ಕೋಳುಮುಡಿಯನ
ಕಡ್ಲೇರ
ಕೊಡಗದ್ದೆ
ಕೋಚನ
ಕಾಲಮಂದಿರ
ಕೊಂಬನ
ಕೊಟ್ಟಕೇರಿಯನ
ಕೀಜನ
ಕೊತ್ತೋಳಿರ
ಕಲ್ಲಂಬಿ
ಕಾಚಲು
ಕೆಕಾರೀರ
ಕೈಬಿಲಿರ
ಕೊಯಂಗಜೆ
ಕಟ್ಟೆಕೋಡಿ
ಕೋಲ್ವಾರು
ಕೊರಂಬಡ್ಕ
ಕರುಂಬಿ
ಕೊಂಬಾರನ
ಕೊಟ್ಟಂಗೇರಿ
ಕೆಂಜನ
ಕೋಳುಮಾಡನ
ಕುರಿಕಡ
ಕೆರೆಮನೆ
ಕೇಚಪ್ಪನ
ಕೊಳಂಬೆ
ಕುಂಬಳಚೇರಿ
ಕುಂದಲ್ಪಾಡಿ
ಕೋಟುಮಾಡ
ಕೊಳ್ಳೀರ
ಕೆಮ್ಮಾರನ

ಕುಂಬನ
ಕುಂದನ
ಕುವೆಂಡ್ರ
ಕೋಟೆಮನೆ
ಕಾವೇರಿಮನೆ
ಕಲ್ಲೆಮ್ಮನ
ಕುತ್ತಿಯಾಡಿ
ಕೊಳಗೆ
ಕಲ್ಲುಗುಡ್ಡೆ
ಕತ್ರಿಕೊಲ್ಲಿ
ಕುಕ್ಕೇರ
ಕೀಲಾರು
ಕಲ್ಲುಮುಟ್ಲು
ಕೇಡನ
ಕಡೋಡಿರ
ಕೋಡಿಯಾಡ್ಕ
ಕೋಪನ
ಕೆಳಗೆಮನೆ
ಕಾಲ್ಯನ
ಕಾಚಟು
ಕುಟ್ಟನ
ಕುಂಡ್ಯನ
ಕುರ್‌ನೆರ
ಕನ್ನಡ್ಕ
ಕಲ್ಲುಗದ್ದೆ
ಕುತ್ಯಾಡಿ
ಕೊರಿಯಾನ
ಕೊಳಂಗಾಯ
ಕುಂಟ್ರಮಜಲು
ಕುಲ್ಲಚೆಟ್ಟೀರ
ಕೊಲ್ಯದ
ಕಾಂಗೀರ
ಕೂರನ
ಕಾಯರ

**ಖ–1**
ಖಂಡಿಗೆ

**ಗ–10**
ಗುಡ್ಡೇರ
ಗುಡ್ಡನ
ಗೂಡಂಜಿ
ಗುತ್ತಿಮುಂಡನ
ಗುತ್ತಿಯೇಟಿ
ಗುಡ್ಡೆಮನೆ
ಗೋವಿಂದಮ್ಮನ
ಗುತ್ತು
ಗೌಡುದಾರೆ
ಗೋಣಿಗಾರ

**ಚ–16**
ಚೆಟ್ಟಿಮಾಡ
ಚೊಕ್ಕಾಡಿ
ಚೆದುಕಾರು
ಚಾಂಗನ
ಚೂಡಾಡಮ್ಮನ
ಚೇಯುಪ್ಪನ
ಚಂಡೀರ
ಚಟ್ಟಡ್ಕ
ಚೆಟ್ಟನೆರವನ
ಚಿಲ್ಲನ
ಚೆರಿಯಮನೆ
ಚೇಯಂಡಿರ
ಚೋಂಡಿರ
ಚಂದಡ್ಕ
ಚೆಳ್ಳಂಗಾರ್
ಚಂಗರಿ
ಚೊಟ್ಟಂಡ

**ಜ–4**
ಜೈನೀರ
ಜತ್ತಣ್ಣನ
ಜಪ್ಪೆಕೋಡಿ
ಜಪ್ಪೆಕೋವೆ

**ಪ–46**
ಪಟ್ಟಡ
ಪೊನ್ನಚ್ಚನ
ಪೆರುಬಾಯಿ
ಪಾಂಡನ
ಪುಳಕಂಡ್ರ
ಪೇರಿಯನ
ಪೋರೆಯನ
ಪುಳಂಜನ
ಪರ್ಲಕೋಟಿ
ಪಳಂಗೋಟು
ಪಾಣತ್ತಲೆ
ಪೈಕೇರ
ಪಾಂಡಿ
ಪರಿಜನ
ಪರಿವಾರ
ಪೊನ್ನೇಟಿ
ಪಡಿಕಲ್
ಪುದಿನೆರವನ
ಪೊಡನೊಳನ
ಪಡ್ಡಂಬೈಲು
ಪಾಡಿ
ಪಾರೇರ
ಪಾರೆಮಜಲು
ಪೊಯ್ಯಕಂಡೀರ
ಪೊಕ್ಕುಳಂಡ್ರ
ಪಾಡಿಚೆಟ್ಟಿರ
ಪಾರೆಪ್ಪಾಡಿ
ಪೆಲ್‌ತಡ್ಕ
ಪಂಜದ
ಪಟ್ಟಾಂದಿರ
ಪೋತಂಡ್ರ
ಪೆರುಮುಂಡ
ಪಂಜಿಪಳ್ಳ
ಪನಿಯೋಡಿ
ಪನಿಯಡ್ಕ
ಪೂಜಾರಿ
ಪಡ್ಪು
ಪಟ್ಟೆಮನೆ
ಪೂಜಾರಿಗದ್ದೆ
ಪೀಟೆಮನೆ
ಪಳಂಗಾಯ
ಪಲ್ಲೇತಿ
ಪಟ್ಟತ್ರಿ
ಪಣಿಲೆ
ಪೆಮ್ಮಟೆ

**ಬ–30**
ಬೈಲೋಳಿರ
ಬಿದ್ರುಪಣೆ
ಬಿರುಮಾಣನ
ಬಳ್ಳಡ್ಕ
ಬೆಪ್ಪುರನ
ಬೈನೆರವನ
ಬೈತಡ್ಕ
ಬಾರಿಕೆ
ಬಾರನ
ಬಳಪದ
ಬೊಳ್ಳೂರು
ಬೈಲೇರ
ಬಾರಿಯಂಡ
ಬೈಮನ
ಬೆಳ್ಯನ
ಬೊಳ್ಳುಮನೆ
ಬೊಮ್ಮಿಯನ
ಬೇಕಲ್
ಬೊಳ್ತಜಿರ

ಬಾಳಾಡಿ
ಬಾಡನ
ಬೊಮ್ಮೇಗೌಡನ
ಬೇರಿಕೆ
ಬೆಳ್ಳಿಪಾಡಿ
ಬಾಕಿಲನ
ಬಡ್ಡನ
ಬಬ್ಬೀರ
ಬೋಳನ
ಬಿಟ್ಟೀರ
ಬಟ್ಯನ
**ಮ–34**
ಮಳ್ಳಾಂದಿರ
ಮುದ್ಯನ
ಮೂಲೆಮಜಲು
ಮೊಟ್ಟನ
ಮತ್ತಾರಿ
ಮುಕ್ಕಾಟಿರ
ಮಿತ್ತೂರು
ಮೊಗೇರ
ಮುಂಡೋಡಿ
ಮೂವನ
ಮೇಡತನ
ಮೋಂಟಡ್ಕ
ಮೊಟ್ಟೇರ
ಮಂದೇಡಿರ
ಮಂದ್ರಿರ
ಮೇರಜೆ
ಮೂಟೇರ
ಮಾಡೆನ
ಮೂಡಗದ್ದೆ
ಮಡತಿಲ
ಮಜ್ಜಿಗೆಗೌಡನ
ಮಂಡೀರ
ಮೇಚನ
ಬೊಟ್ಟುಮನೆ
ಬೈಚನ
ಬಾಳೆಹಿತ್ಲು
ಬಾಳಜಿ
**ತ–14**
ತೆಕ್ಕಡೆ
ತುಮ್‌ತಜೆ
ತೋಟಂಬೈಲು
ತಳೂರು
ತೇನನ
ತೊತ್ಯನ
ತೂಟೇರ
ತೇಲಪ್ಪನ
ತಡಿಯಪ್ಪನ
ತಿರೋಡಿ
ತೊಕ್ಕುಳಿ
ತಮ್ಮಚ್ಚನ
ತಂಟೆಪಾಡಿ
ತೊರೆ
**ದ–13**
ದೇವಜನ
ದೇವಂಗೋಡಿ
ದೋಲ್‌ಪಾಡಿ
ದಬ್ಬಡ್ಕ
ದೊಡ್ಡಡ್ಕ
ದೇರಾಜೆ
ದೇರಣ್ಣನ
ದಾಯನ
ದೇವಾಯಿರ
ದಂಡಿನ
ದೇಶಕೋಡಿ
ದೊಡ್ಡೀರ
**ನ–24**
ನೆಯ್ಯಣೀರ
ನಡುಗಲ್ಲು
ನಡುವಟ್ಟಿರ
ನಿಡ್ಯಮಲೆ
ನಂಗಾರು
ನಾಟೋಳನ
ನೆರಿಯನ
ನಂಬುಡಿರ
ನಿಂಗಪ್ಪನ
ನಡುಮನೆ
ನೆಕ್ಕಿಲ
ನೂಜುಬೈಲು
ನಡುಬೆಟ್ಟು
ನಿಡುಬೆ
ನೆಡ್ಬ್‌ಬು
ನಾರ್ಕೋಡಿ
ನಿಡಂಜಿ
ನಂಜನಮಲೆ
ನಾಡ್ಯನ
ನಾಡೆಯ್ಯನ
ನೆಲ್ಲಿಪುಣಿ
ನಡುಮುಟ್ಲು
ನಾರುಕೋಡಿ
ನೆಡಿಗಿಲು
**ಯ–3**
ಯಂಕನ
ಯಾಲದಾಳು
ಯಾಪರೆ
**ರ–1**
ರಾಮಕಜೆ
**ಲ–1**
ಲಕ್ಕಂಡ್ರ
**ವ–1**
ವಾಟೇರಿರ
**ಸ–12**
ಸೂದನ
ಸುಳ್ಯಕೋಡಿ
ಸೂರ್ತಲೆ
ಸೋಣಂಗೇರಿ
ಸುರುಳಿಮನೆ
ಸಬ್ಬಂಡ್ರ
ಸಣ್ಣಮ್ಮನ
ಸೆಟ್ಟಿಜನ
ಸೂದಾಡಮ್ಮನ
ಸೋಮೇಟಿರ
ಪಾರೆಕೋಡಿ
**ಶ–3**
ಶಂಕರನ
ಶಿರಾಜೆ
ಶಿರಕಜೆ
**ಹ–12**
ಹೊಸೂರು
ಹಂಡನ
ಹೊದ್ದೇಟಿ
ಹೊಸಮನೆ
ಹುಲ್ಲುಬೆಂಕಿ
ಹೊಸಗದ್ದೆ
ಹುಲಿಮನೆ
ಹುದೇರಿ
ಹೊಸೋಳಿಕೆ
ಹೆಮ್ಮನ
ಹೊಳಿಕರೆ
ಹೊಸೊಕ್ಲು

## 2017–2022ನೇ ಸಾಲಿನ ಆಡಳಿತ ಮಂಡಳಿ

ಅಧ್ಯಕ್ಷರು :

**ಹೊಸೂರು ರಮೇಶ್ ಜೋಯಪ್ಪ**

ಉಪಾಧ್ಯಕ್ಷರು :

**ಅಂಬೆಕಲ್ಲು ನವೀನ್ ಕುಶಾಲಪ್ಪ (ಶ್ಯಾಂ)**

ಕಾರ್ಯದರ್ಶಿ :

**ಕೊಟ್ಟಕೇರಿಯನ ಡಿ. ದಯಾನಂದ**

ಸಹ ಕಾರ್ಯದರ್ಶಿ :

**ತಳೂರು ಕೆ. ದಿನೇಶ್‌ಕುಮಾರ್**

ಖಜಾಂಚಿ :

**ಕಟ್ಟೆಮನೆ ಆರ್. ಸೋನಾ**

ನಿರ್ದೇಶಕರು :

**ಪರಿಚನ ಸತೀಶ್**

**ದೇವಂಗೋಡಿ ಹರ್ಷ**

**ಪಾಣತ್ತಲೆ ಮಂದಪ್ಪ**

**ಕೆದಂಬಾಡಿ ಕೀರ್ತಿಕುಮಾರ್ (ವೇಣು)**

**ಹುದೇರಿ ಜಗದೀಶ್ ಉತ್ತಪ್ಪ**

**ಪೊಕ್ಕುಳಂಡ್ರ ಮನೋಜ್**

**ಕುದುಪಜೆ ಬೋಜಪ್ಪ ಮುತ್ತಣ್ಣ**

**ಕೆದಂಬಾಡಿ ಕಾಂಚನಾ ಕೀರ್ತನ್**

**ಕಾಳೇರಮ್ಮನ ಎನ್. ಲತ**

**ಚೆರಿಯಮನೆ ರೋಹಿಣಿ ವಿಠಲ**

**ಮತ್ತಾರಿ ಹಿ. ರಮೇಶ್**

ವ್ಯವಸ್ಥಾಪಕರು

**ಕಡ್ಯದ ಎಸ್. ದಿನೇಶ್**

ವೀಕ್ಷಕರು

**ಕೋಳಿಬೈಲು ಬಿ. ವಿಜಯ**

ಜೂನಿಯರ್ ವ್ಯಸ್ಥಾಪಕರು, ಮೈಸೂರು ಶಾಖೆ

